ಮತ್ತು ಬಾಪು 150ನೇ ಜನ್ಮ ವರ್ಷಾಚರಣೆ ಪುಸ್ತಕ ಮಾಲಿಕೆ

# ಮಹಿಳೆಯರು

ಮೋಹನದಾಸ ಕರಮಚಂದ ಗಾಂಧಿ



ಕನ್ನಡಾನುವಾದ : ಶ್ರೀ ಜಿ.ಡಿ. ದೇಸಾಯಿ

ಬಾ–ಬಾಪು 150ನೇ




ವರ್ಷಾಚರಣೆ ಪುಸ್ತಕ ಮಾಲಿಕೆ

# ಮಹಿಳೆಯರು

ಮೋಹನದಾಸ ಕರಮಚಂದ ಗಾಂಧಿ

ಕನ್ನಡಾನುವಾದ
ಶ್ರೀ ಜಿ.ಡಿ. ದೇಸಾಯಿ

ಪ್ರಕಾಶಕರು
**ಕರ್ನಾಟಕ ಗಾಂಧೀ ಸ್ಮಾರಕ ನಿಧಿ**
ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560001, ದೂರವಾಣಿ : 080–22261967

ಮಹಿಳೆಯರು
ಲೇಖಕರು : ಮೋಹನದಾಸ ಕರಮಚಂದ ಗಾಂಧಿ
ಕನ್ನಡಾನುವಾದ : ಶ್ರೀ ಜಿ.ಡಿ. ದೇಸಾಯಿ
ಪ್ರಕಾಶಕರು : ಕರ್ನಾಟಕ ಗಾಂಧೀ ಸ್ಮಾರಕ ನಿಧಿ
ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560001, ದೂರವಾಣಿ : 080–22261967

ಮೊದಲ ಮುದ್ರಣ : 1959

ಪರಿಷ್ಕೃತ ದ್ವಿತೀಯ ಮುದ್ರಣ : 2019

ಪ್ರತಿಗಳು : 1000

ಪುಟಗಳು : XIV + 92

ಬೆಲೆ : 63/–

ISBN No : 978-81-941136-9-0

ಮುದ್ರಕರು : ಕ್ರಿಯೇಟಿವ್‌ಗೀಕ್ಸ್
ಯಾದವ ಕಾಲೇಜು ರಸ್ತೆ
ಮಾಧವನಗರ, ಬೆಂಗಳೂರು–560001
ದೂರವಾಣಿ : 080 40927049



## ಅರ್ಪಣೆ

ಕರ್ನಾಟಕದ ಕಸ್ತೂರ್‌ಬಾ ಎಂದೇ ಜನಮಾನಸದಲ್ಲಿ
ಪ್ರತಿಷ್ಠಾಪಿತರಾಗಿರುವ
**ಯಶೋಧರಮ್ಮ ದಾಸಪ್ಪ** ಅವರಿಗೆ
ಗೌರವಪೂರ್ವಕವಾಗಿ



"ಜೀವನವೆಂಬುದೊಂದು ಆಕಾಂಕ್ಷೆ, ಸಿದ್ಧಿ ಮತ್ತು ಆತ್ಮಸಾಕ್ಷಾತ್ಕಾರಗಳಿಗಾಗಿ ಹೆಣಗುವುದೇ ಅದರ ಧ್ಯೇಯವಾಗಿದೆ. ನಮ್ಮ ಲೋಪದೋಷಗಳ ಮೂಲಕ ನಾವು ಆ ಉಚ್ಚಧ್ಯೇಯವನ್ನು ಕೆಳಗಿಳಿಸಕೂಡದು. ಅಂಥ ನನ್ನ ಲೋಪದೋಷಗಳ ಪೂರ್ಣ ಅರಿವು ನನಗೆ ಇದೆ. ಅವುಗಳನ್ನು ಹೋಗಲಾಡಿಸಲು ನಾನು ಸತ್ಯ ದೇವತೆಯನ್ನು ಮೂಕ ಪ್ರಾರ್ಥನೆಯಿಂದ ಆರಾಧಿಸುತ್ತಿರುವೆ."

– ಮಹಾತ್ಮ ಗಾಂಧಿ

# ನಿವ್ಯೋಡನೆ

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯು ಬಾ ಮತ್ತು ಬಾಪು ಅವರ 150ನೇ ವರ್ಷಾಚರಣೆಯನ್ನು ಅರ್ಥಪೂರ್ಣವಾಗಿ ಆಚರಿಸಲು ಹಾಕಿಕೊಂಡಿರುವ ಹಲವಾರು ಕಾರ್ಯ ಯೋಜನೆಗಳಲ್ಲಿ, ಗಾಂಧೀಜಿ ಅವರ ಚಿಂತನೆಗಳು ಮತ್ತು ತತ್ವ ಸಿದ್ಧಾಂತಗಳುಳ್ಳ ಸಾಹಿತ್ಯವನ್ನು ಪ್ರಕಟಿಸುವುದು, ಪ್ರದರ್ಶಿಸುವುದು ಮತ್ತು ವಿತರಿಸುವುದೂ ಪ್ರಮುಖವಾದುದಾಗಿದೆ. ಅದರಂತೆ ಮಹಾತ್ಮಾ ಗಾಂಧಿ ಅವರ ಮಹಿಳಾ ಸಬಲೀಕರಣದ ಕುರಿತಾದ ಕನ್ನಡಾನುವಾದ “ಮಹಿಳೆಯರು” ಕೃತಿಯನ್ನು ಪ್ರಕಟಿಸಲು ನನಗೆ ಅತ್ಯಂತ ಹರ್ಷವಾಗುತ್ತದೆ.

ಮಹಿಳೆಯರನ್ನು ಕುರಿತು ಹಲವಾರು ಘಟ್ಟಗಳಲ್ಲಿ ಮತ್ತು ಘಟನೆಗಳಲ್ಲಿ, ಅವರು ತಳೆದ ನಿಲುವುಗಳು ಮತ್ತು ಅವರ ಒಡನಾಟಕ್ಕೆ ಬಂದ ಮಹಿಳೆಯರ ಅಂತಃಕರಣವನ್ನು ಅರಿತ ಗಾಂಧಿ ಅವರು ಕಾಲಕಾಲಕ್ಕೆ ಅವರ ಹರಿಜನ ಮತ್ತು ಯಂಗ್ ಇಂಡಿಯಾ ಪತ್ರಿಕೆಯಲ್ಲಿ ಬರೆದ ಲೇಖನಗಳ ಸಂಕಲನವೇ ಇದಾಗಿದೆ. ಮಹಿಳೆಯರ ಬಗ್ಗೆ ಅಪಾರ ವಿಶ್ವಾಸ, ಪ್ರೀತಿ ಹಾಗೂ ಗೌರವನ್ನು ಹೊಂದಿದ್ದ ಗಾಂಧಿ ಅವರು ಭಾರತ ಸ್ವಾತಂತ್ರ ಹೋರಾಟದಲ್ಲಿ ಮಹಿಳೆಯರಿಲ್ಲದೆ ಸ್ವಾತಂತ್ರ ದೊರಕದು ಎಂದು ನಂಬಿದವರು. ಸ್ವಾತಂತ್ರ್ಯ ಹೋರಾಟ ಸಂದರ್ಭದಲ್ಲಿ ಸಾಮಾಜಿಕ ಚಳುವಳಿಯಲ್ಲಿ, ಸ್ವದೇಶಿ ಚಳುವಳಿಯಲ್ಲಿ ಮಹಿಳೆಯರು ನಿರಾತಂಕವಾಗಿ, ಸಕ್ರಿಯವಾಗಿ ತೊಡಗಿಸಿಕೊಳ್ಳಲು ಕರೆಯಿತ್ತರು. ನಿರ್ಮಲ, ನಿಷ್ಕಲಂಕ ವ್ಯಕ್ತಿತ್ವದ ಗಾಂಧಿ ಅವರ ಕರೆಗೆ, ಮಹಿಳೆಯರು ಸ್ಪಂದಿಸಿ, ಸ್ವಇಚ್ಛೆಯಿಂದ ಭಾಗಿಯಾದರು. ಆ ಕಥಾನಕವನ್ನು ಈ ಕೃತಿ ಅತ್ಯಂತ ಹೃದಯಸ್ಪರ್ಶಿಯಾಗಿ ತೆರೆದಿಡುತ್ತದೆ. ಮಹಿಳಾ ದೌರ್ಜನ್ಯ,

ಅವರ ಮೇಲಿನ ಅನಿಷ್ಟ ಪದ್ಧತಿಗಳು ಅವರ ಅವಲಂಬಿತ ಬದುಕಿನ ಬಗ್ಗೆ ಚರ್ಚಿಸುತ್ತಾ ಎಲ್ಲಾ ಅನ್ಯಾಯ ಮತ್ತು ಹೇರಿಕೆ ವಿರುದ್ಧ ದನಿ ಎತ್ತಿದರು. ಸಮೂಹವಾಸ–ಆಶ್ರಮ ಜೀವನ ಮತ್ತು ಖಾದಿ–ಸ್ವದೇಶಿ, ಸ್ವಾಭಿಮಾನಿ ಮತ್ತು ಸ್ವಾವಲಂಬನೆಯ ಜೀವನದ ಹಾದಿಯನ್ನು ಅವರಿಗೆ ತೋರಿಸಿಕೊಟ್ಟರು. ಇವುಗಳನ್ನು ಗಮನಿಸಿದಾಗ ಶತಮಾನದಿಂದ ಮಹಿಳೆಯರನ್ನು ನಾವೆಷ್ಟು ಹೀನಾಯವಾಗಿ ಕಂಡಿದ್ದೇವೆಂಬ ಭಾವ ಪುರುಷರಲ್ಲಿ ಪಶ್ಚಾತ್ತಾಪಪಡುವಂತೆ ಮಾಡುತ್ತದೆ.

ಈ ಕೃತಿಯನ್ನು ಲೋಕಾರ್ಪಣೆ ಮಾಡಲು ಸಿದ್ಧಗೊಳಿಸಿದ ಗಾಂಧಿ ಭವನದ ಗೌ. ಕಾರ್ಯದರ್ಶಿ, ಶ್ರೀಮತಿ ಇಂದಿರಾ ಕೃಷ್ಣಪ್ಪ ಅವರಿಗೆ ನನ್ನ ಅಭಿನಂದನೆಗಳು ಸಲ್ಲುತ್ತವೆ. ಈ ಕೃತಿಯನ್ನು ಪ್ರಕಟಿಸಲು ಸಹಕರಿಸಿದ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಎಲ್ಲಾ ಸದಸ್ಯರುಗಳಿಗೂ ಕೃತಜ್ಞತೆಗಳು ಸಲ್ಲುತ್ತವೆ. ಇದನ್ನು ಅಂದವಾಗಿ ಮುದ್ರಿಸಿದ ಕ್ರಿಯೇಟಿವ್‌ಗೀಕ್ಸ್‌ನ ಮಹೇಶ್ ಮತ್ತು ತಂಡಕ್ಕೆ ಆತ್ಮೀಯ ನಮನಗಳು.

ಡಾ. ವೂಡೇ ಪಿ. ಕೃಷ್ಣ
ಅಧ್ಯಕ್ಷರು
ಕರ್ನಾಟಕ ಗಾಂಧೀ ಸ್ಮಾರಕ ನಿಧಿ

# ನಮ್ಮ ನಮ್ಮಲ್ಲಿ

ಬಾ ಮತ್ತು ಬಾಪು ಅವರ 150ನೇ ವರ್ಷಾಚರಣೆಯ ಸುಸಂದರ್ಭದಲ್ಲಿ, ಮಹಿಳೆಯರ ಸಬಲೀಕರಣದ ಕುರಿತಾದ ಈ ಕೃತಿಯನ್ನು ಲೋಕಾರ್ಪಣೆ ಮಾಡಲು ಹರ್ಷವೆನಿಸುತ್ತದೆ. ಭಾರತ ಸ್ವಾತಂತ್ರ್ಯ ಸಂಗ್ರಾಮದ ಜೊತೆಜೊತೆಗೆ ಗಾಂಧೀಜಿ ಅವರ ಸಾಮಾಜಿಕ ಕಳಕಳಿ, ಮಹಿಳಾಪರ ಹೋರಾಟದ ಕುರಿತಾದ 'ವುಮೆನ್ಸ್' ಇಂಗ್ಲಿಷ್ ಕೃತಿಯನ್ನು ಶ್ರೀ ಜಿ.ಡಿ. ದೇಸಾಯಿ ಅವರು ಕನ್ನಡೀಕರಿಸಿ ನಮ್ಮ ಅರಿವಿಗೆ ಇಲ್ಲಿ ತೆರೆದಿಟ್ಟಿದ್ದಾರೆ.

ಮಹಾತ್ಮಾಜೀ ಅವರ ಪ್ರಾಮಾಣಿಕ ಮತ್ತು ಪಾರದರ್ಶಕ ವ್ಯಕ್ತಿತ್ವ, ಅಂದಿನ ಎಲ್ಲಾ ಸಮುದಾಯದ ಜನರನ್ನು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಲು ಉತ್ತೇಜಿಸಿದಂತೆ, ಮಹಿಳೆಯರು ನಿರ್ಭಯವಾಗಿ ಗಾಂಧಿ ಅವರ ಸಾಮಾಜಿಕ ಚಳುವಳಿ ಮತ್ತು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುವಂತೆ ಮಾಡಿತ್ತು. ವೈಯಕ್ತಿಕವಾಗಿ ಹಾಗೂ ಸಾಮಾಜಿಕವಾಗಿ ಮತ್ತು ಆಶ್ರಮವಾಸದಲ್ಲಿ ಗಾಂಧಿ ಅವರ ಒಡನಾಟಕ್ಕೆ ಬಂದ ದೇಶ-ವಿದೇಶದ ಮಹಿಳೆಯರನ್ನು ಕುರಿತು ಅನೇಕ ಸಂದರ್ಭದಲ್ಲಿ ಅವರಾಡಿದ ನುಡಿಗಳು, ತೆಗೆದುಕೊಂಡ ನಿರ್ಧಾರಗಳು, ಮಹಿಳೆಯರ ಮೇಲಿನ ಅನಿಷ್ಟ ಪದ್ಧತಿಗಳನ್ನು ಹೋಗಲಾಡಿಸಲು ಅವರು ನಡೆಸಿದ ಹೋರಾಟಗಳ ಪ್ರತಿರೂಪವೇ, 'ಮಹಿಳೆಯರು' ಎಂಬ ಈ ಕೃತಿಯ ಅಡಿಪಾಯವಾಗಿದೆ. ಮಹಿಳೆ ಪುರುಷನಷ್ಟೇ ಸಮಾನಳು, ಅವಳ ಹಕ್ಕು, ಅವಕಾಶ, ಕರ್ತವ್ಯಗಳ ಕುರಿತು ಅವರ 'ಹರಿಜನ' ಮತ್ತು 'ಯಂಗ್ ಇಂಡಿಯಾ' ಪತ್ರಿಕೆಗಳಲ್ಲಿ ಆಗಿಂದಾಗ್ಗೆ ಬರೆದ ಲೇಖನಗಳು ಮತ್ತು ವಿಚಾರಗಳೇ ಈ ಕೃತಿಗೆ ಮೂಲಾಧಾರವಾಗಿವೆ. ಖಾದಿ-ಸ್ವದೇಶಿ ಚಳುವಳಿಯಲ್ಲಿ, ಮಹಿಳೆಯರ ಪಾಲ್ಗೊಳ್ಳುವಿಕೆಯೇ ಭಾರತ ಸ್ವಾತಂತ್ರ್ಯ ಹೋರಾಟದ

ಶಾಂತಿಯುತ ಭಾಗವಾಗಿದೆ. ಎಂದು ಮಹಿಳೆಯರನ್ನು ಎಡಬಿಡದೆ ಪ್ರೋತ್ಸಾಹಿಸಿದ್ದರಿಂದ ಖಾದಿ ಚಳುವಳಿಯಲ್ಲಿ ಪುರುಷರಿಗಿಂತ ಅಧಿಕ ಮಹಿಳೆಯರು ಸ್ವಾವಲಂಬಿಗಳಾಗಲು ಸಾಧ್ಯವಾಯಿತೆಂಬುದನ್ನು ಗಮನಿಸಬಹುದು.

ಗಾಂಧೀಜಿ ಅವರು ಹೇಳಿದ "ಪುರುಷನು ಮಹಿಳೆಯರನ್ನು ಅರ್ಧಾಂಗಿ-ಸಹಚಾರಿಣಿ ಎಂದು ಭಾವಿಸಿಲ್ಲ ಇದರಿಂದ ಸಮಾಜದ ಅರ್ಧಭಾಗಕ್ಕೆ ಪಕ್ಷಪಾತವಾದಂತಾಗಿದೆ. ನಾವು ಮಾಡಿದ ಮಹದನ್ಯಾಯವನ್ನು, ಅದರ ಋಣಭಾರವನ್ನು ಹೊರಬೇಕು", ಎಂಬ ಮಾತು ಇಂದಿಗೂ ಸತ್ಯವಾಗಿದೆ. ಆ ಮಹದ್ ನ್ಯಾಯವನ್ನು ಇಂದಿನ ಪುರುಷ ಸಮುದಾಯ ಸರಿಪಡಿಸುವ ಕಡೆ ಕಾರ್ಯೋನ್ಮುಖನಾದಾಗ ಮಾತ್ರ ಗಾಂಧಿ ಆಶಯಗಳಿಗೆ ಋಣ ತೀರಿಸಿದಂತಾಗುತ್ತದೆ.

ಈ ಕೃತಿಯನ್ನು ಸಂಪಾದಿಸಿದ ಅಂದಿನ ಸಂಪಾದಕ ಮಂಡಳಿ ಮತ್ತು ಅಧ್ಯಕ್ಷರಾದ ರಾ. ಶ್ರೀ ಹುಕ್ಕೇರಿಕರ ಅವರಿಗೆ ಪ್ರಥಮ ನಮನಗಳು ಸಲ್ಲುತ್ತವೆ. ಈ ಕೃತಿಯನ್ನು ಮರುಮುದ್ರಣಗೊಳಿಸಿ ಪ್ರಕಟಿಸಲು ಸಹಕರಿಸಿದ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಎಲ್ಲಾ ಸದಸ್ಯರುಗಳಿಗೂ ಕೃತಜ್ಞತೆಗಳು ಸಲ್ಲುತ್ತವೆ. ಇಂಥಹ ಅಪೂರ್ವ ಕೃತಿಗಳನ್ನು ಈ ವರ್ಷಾಚರಣೆಯಲ್ಲಿ ಪ್ರಕಟಿಸಲು ಸದಾ ಉತ್ಸುಕರಾಗಿರುವ ಗಾಂಧೀ ಭವನದ ಅಧ್ಯಕ್ಷರಾಗಿರುವ ಡಾ. ವೂಡೇ ಪಿ. ಕೃಷ್ಣ ಅವರಿಗೆ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ. ಈ ಕೃತಿಯ ಪರಿಷ್ಕರಣೆ ಮತ್ತು ಕರಡು ತಿದ್ದುಪಡಿಗೆ ಸಹಕರಿಸಿದ ಶ್ರೀ ಇಂದ್ರ ಕುಮಾರ್ ಅವರಿಗೂ ಹಾಗೂ ಇದನ್ನು ಅಂದವಾಗಿ ಮುದ್ರಿಸಿದ ಕ್ರಿಯೇಟಿವ್‌ಗೀಕ್ಸ್‌ನ ಮಹೇಶ್ ಮತ್ತು ತಂಡದವರಿಗೆ ಆತ್ಮೀಯ ನಮನಗಳು.

ಇಂದಿರಾ ಕೃಷ್ಣಪ್ಪ
ಗೌ॥ ಕಾರ್ಯದರ್ಶಿ

# ಮೊದಲ ಮಾತು

ಗಾಂಧೀಜಿ ಕುಳಿತಲ್ಲಿ ದೇವಮಂದಿರವಾಯಿತು; ನಡೆದಲ್ಲಿ ಪವಿತ್ರ ಭೂಮಿಯಾಯಿತು–ಎಂದು ಪಂಡಿತ ನೆಹರೂ ಅವರು ಹೇಳಿದರು. ಗಾಂಧೀಜಿ ಅವರ ಜೀವನ ಕಾಲದಲ್ಲಿ ಅವರ ಮಾರ್ಗದರ್ಶನದಲ್ಲಿ ಕೆಲಸವನ್ನು ಮಾಡುವ ಸೌಭಾಗ್ಯವು ಅನೇಕರಿಗೆ ಲಭಿಸಿತು. ಅವರ ವ್ಯಕ್ತಿತ್ವವನ್ನು ತೋರಿದ ದಾರಿಯನ್ನು ಇಂದು ನಾವು ಅವರ ಲೇಖನಗಳ ಮೂಲಕ ಕಂಡುಕೊಳ್ಳಬೇಕಾಗಿದೆ.

ಗಾಂಧೀಜಿ ಅವರ ವಿಚಾರಗಳನ್ನು ಈ ರೀತಿ ಜನತೆಯ ಮುಂದಿಡುವ ದೃಷ್ಟಿಯಿಂದ ಗಾಂಧೀ ಸ್ಮಾರಕ ನಿಧಿಯವರು ಬೇರೆ ಬೇರೆ ಭಾರತೀಯ ಭಾಷೆಗಳಲ್ಲಿ ಗಾಂಧೀ ಸಾಹಿತ್ಯವನ್ನು ಭಾಷಾಂತರಿಸಿ ಪೂರೈಸುತ್ತಿದ್ದಾರೆ. ಕನ್ನಡದಲ್ಲಿ ಈಗಾಗಲೇ ಇಂಥ ಅನೇಕ ಪ್ರೌಢ ಪ್ರಕಟಣೆಗಳಾಗಿವೆ.

ಹೆಚ್ಚು ಸರಳವಾದ ಭಾಷೆಯಲ್ಲಿ ಗಾಂಧೀ ಸಾಹಿತ್ಯವನ್ನು ಒದಗಿಸುವ ದೃಷ್ಟಿಯಿಂದಲೂ, ಇಂಥ ಪ್ರಕಟಣೆಗಳು ಹಣ ಮತ್ತು ಆಕಾರಗಳ ದೃಷ್ಟಿಯಿಂದ ಹೆಚ್ಚು ಸಂಗ್ರಹಾನುಕೂಲವಾಗಿರುವಂತೆಯೂ ಇನ್ನೂ ಎರಡು ಆಕಾರಗಳಲ್ಲಿ ಗಾಂಧೀ ಸಾಹಿತ್ಯವನ್ನು ಪ್ರಕಟಿಸುವುದೆಂದು ನಿರ್ಧರಿಸಿತು.

ಈ ಪ್ರಕಟಣೆಗಳಲ್ಲಿಯ ಮೊದಲಿನ ಮಾಲಿಕೆಯಲ್ಲಿ ಹೆಚ್ಚು ಸರಳವಾದ ಪ್ರತಿಪಾದನೆಯ ಕಡೆ ಲಕ್ಷ್ಯವನ್ನು ಪೂರೈಸಿದ್ದರೆ, ಜೇಬಿನಾ ವೃತ್ತಿಯಲ್ಲಿ ಆ ವಿಷಯಗಳ ಬಗೆಗೆ ಗಾಂಧೀ ವಿಚಾರಸಾರವು ನೆನಪಿನಲ್ಲಿ ಉಳಿಯುವಂತೆ ಸೂತ್ರಬದ್ಧವಾಗಿ ಕೊಡಲಾಗಿದೆ.

ಶಿಕ್ಷಣ ಮತ್ತು ಇತರ ವಿಧಾಯಕ ಕಾರ್ಯಕ್ಷೇತ್ರಗಳಲ್ಲಿ ಇಂದು ಗಾಂಧೀ ವಿಚಾರದ ತಿಳಿವಳಿಕೆ ಮತ್ತು ಅನುಷ್ಠಾನದ ಅವಶ್ಯಕತೆ ಎಷ್ಟಿದೆಯೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಇಂಥ ವಿಚಾರಗಳಲ್ಲಿ ಆಸಕ್ತಿಯುಳ್ಳ ಶಿಕ್ಷಣ ಸಂಸ್ಥೆಗಳು, ವಯಸ್ಕರ ಶಿಕ್ಷಣ ಸಂಸ್ಥೆಗಳು, ಹಳ್ಳಿ ಮತ್ತು ಪಟ್ಟಣಗಳಲ್ಲಿಯ ವಾಚನಾಲಯಗಳು ಮತ್ತು ವಿಧಾಯಕ ಕಾರ್ಯಕರ್ತರು ಈ ಪ್ರಕಟಣೆಗಳನ್ನು ಸ್ವಾಗತಿಸುವುದಾಗಿ ನಂಬಿದ್ದೇವೆ.

ವಿದ್ಯಾಗಿರಿ — ರಾ. ಶ್ರೀ. ಹುಕ್ಕೇರಿಕರ

ಧಾರವಾಡ — ಅಧ್ಯಕ್ಷ, ಸ್ಥಾನಿಕ ಸಂಪಾದಕ ಮಂಡಳ

ದಿ.10–12–1956

## ಪ್ರಥಮ ಮುದ್ರಣದ ಸಂಪಾದಕ ಮಂಡಳಿ

(1959)

ಪ್ರಧಾನ ಸಂಪಾದಕ

ಶ್ರೀ ರಾ. ಯ. ಧಾರವಾಡಕರ

ಸಂಪಾದಕರು

ಶ್ರೀ ಬಿಂದು ಮಾಧವ ಬುರ್ಲಿ

ಶ್ರೀ ಎಸ್.ಎಸ್. ಒಡೆಯರ

ಪ್ರೊ, ಜಿ.ಡಿ. ನಾಡಕರ್ಣಿ

ಶ್ರೀ ಎಂ. ಶಂಕರ

ಶ್ರೀ ಜಿ.ಡಿ. ದೇಸಾಯಿ



ಪ್ರತಿಜ್ಞೆಯು ಸಂಪೂರ್ಣ ಧಾರ್ಮಿಕ ಕೃತಿಯಾಗಿದ್ದು ಮನೋವಿಕಾರದ ಕಾಲಕ್ಕೆ ಕೈಕೊಳ್ಳುವಂತಹದಲ್ಲ. ಶುದ್ಧ ಮನಸ್ಸಿನಿಂದ ದೇವರ ಸಾಕ್ಷಿಯಾಗಿ ಪ್ರತಿಜ್ಞೆಯನ್ನು ಕೈಗೊಳ್ಳಬೇಕು.

– ಮಹಾತ್ಮ ಗಾಂಧಿ

# ಪರಿವಿಡಿ

ಸಂಕ್ಷೇಪ ಸೂಚಿ:

ಹ = ಹರಿಜನ.

ಯ. ಇ. = ಯಂಗ್ ಇಂಡಿಯಾ

# ಸ್ತ್ರೀ ಪುರುಷರ ಸಮಾನತೆ

ಮಹಿಳೆಯರ ಜೊತೆ ಅವರ ಮನಸ್ಸನ್ನೂ ನಾನು ಸಾಕಷ್ಟು ಅರಿತು ಕೊಂಡಿದ್ದೇನೆಂದು ಹೇಳಬಲ್ಲೆ. ಗಂಡಂದಿರೆಲ್ಲಾ ಕಾರಾವಾಸದಲ್ಲಿರುವಾಗ, ಅವರ ಅನೇಕ ಹೆಣ್ಣುಮಕ್ಕಳ ಒಡನಾಡಿಯಾದದ್ದು ನಾನು ದಕ್ಷಿಣ ಆಫ್ರಿಕೆಯಲ್ಲಿರುವಾಗ ಸುಮಾರು ಅರುವತ್ತು ಹೆಣ್ಣು ಮಕ್ಕಳು ಆಶ್ರಮವಾಸಿಗಳಾಗಿದ್ದರು. ಆ ಅರುವತ್ತು ಅವಿವಾಹಿತ ಹಾಗೂ ವಿವಾಹಿತ ವನಿತೆಯರಿಗೆ ನಾನು ಅಣ್ಣನಾಗಿ ಹಾಗು ತಂದೆಯಾಗಿ ಇದ್ದೆ.

(ಹ. 21–11–1936)

* * *

ಪುರುಷನ ಒಡನಾಡಿಯಾದ ಸ್ತ್ರೀ ಪುರುಷನಷ್ಟೇ ಬುದ್ಧಿ ಪ್ರಧಾನಳಿರುವಳು. ಅವಳಿಗೆ ಪುರುಷನ ಪ್ರತಿ ಕಾರ್ಯಾಂಗದಲ್ಲಿಯೂ ಪ್ರವೇಶಿಸುವ ಹಕ್ಕಿದೆಯಲ್ಲದೆ, ಅವಳಿಗೆ ಅವನಷ್ಟೇ ಸ್ವಾತಂತ್ರ್ಯಾಧಿಕಾರ ಹಾಗು ಸಮಾನತೆಗಳಿರುತ್ತವೆ. ಗಂಡಸಿಗಿದ್ದಂತೆ ಹೆಂಗಸಿಗೂ ಅವಳ ಕಾರ್ಯರಂಗದಲ್ಲಿ ಹಿರಿದಾದ ಸ್ಥಾನವಿದೆ. ವಾಸ್ತವವಾಗಿಯೂ ಪರಿಸ್ಥಿತಿ ಈ ರೀತಿ ಇರಬೇಕು. ಈ ಪರಿಸ್ಥಿತಿ ಓದು–ಬರಹಗಳಿಂದ ಬರತಕ್ಕದ್ದಲ್ಲ, ಆದರೂ ದುಷ್ಟ ಸಂಪ್ರದಾಯಗಳ ಮರೆಯಲ್ಲಿ ನಿಂತು ಅನೇಕ ಅಶಿಕ್ಷಿತ ಹಾಗು ಅಯೋಗ್ಯ ಗಂಡಸರು ಅನರ್ಹರಿದ್ದಾಗ್ಯೂ ಹೆಂಗಸರನ್ನು ಹತ್ತಿಕ್ಕಿ ತಾವು ಶ್ರೇಷ್ಠರೆನ್ನುವ ಸಂತೋಷವನ್ನು ಅನುಭೋಗಿಸುತ್ತಾರೆ.

ಹೆಣ್ಣು-ಗಂಡು ಸ್ಥಾನಮಾನಗಳಲ್ಲಿ ಒಂದೇ ಆದರೂ ಏಕರೂಪದಲ್ಲ. ಅವರು ಅನುಪಮ ಜೊತೆಗಾರರಾಗಿರುವುದರಿಂದ ಒಬ್ಬರನ್ನೊಬ್ಬರು ಉಪಚರಿಸುತ್ತಾರೆ; ಒಬ್ಬರಿಗೊಬ್ಬರು ಸಹಾಯ ಮಾಡುತ್ತಾರೆ. ಅಂತಲೇ ಒಬ್ಬರಿಲ್ಲದೆ ಇನ್ನೊಬ್ಬರ ಅಸ್ತಿತ್ವವನ್ನು ಗುರುತಿಸುವುದು ದುಸ್ತರವಾದದ್ದು. ಹೀಗಾಗಿ ಅವರಿಬ್ಬರಲ್ಲಿ ಯಾರಿಗಾದರೂ ಒಬ್ಬರಿಗೆ ಸ್ವಲ್ಪ ವ್ಯತ್ಯಾಸವಾದರೆ, ಆ ವ್ಯತ್ಯಾಸದ ಪರಿಣಾಮ ಇಬ್ಬರನ್ನೂ ಅಷ್ಟಷ್ಟೇ ಬಾಧಿಸುತ್ತದೆ.

(ಭ.ಸ.ಭಾ. 20–2–1918)

* * *

ಹೆಣ್ಣು-ಗಂಡುಗಳಲ್ಲಿರುವ ಸರಿಸಮಾನತೆ ಅವರವರ ವೃತ್ತಿಗಳಿರಲ್ಲಿರಬೇಕೆಂದಿಲ್ಲ. ಹೆಣ್ಣಿಗೆ ಬೇಟೆಯನ್ನಾಡುವುದಕ್ಕಾಗಲಿ ಅಥವಾ ಭಲ್ಲೆಯನ್ನೆಸೆಯುವುದಕ್ಕಾಗಲಿ ಬಂಧನವಿದೆಯೆಂಬ ಕಾನೂನು ಎಲ್ಲಿಯೂ ಇಲ್ಲದೆ ಹೋದರೂ ಗಂಡಸಿಗೆ ಮೀಸಲಾದ ಆ ರಂಗದಲ್ಲಿ ಹೆಣ್ಣು ನುಗ್ಗಿದರೆ ಅವಳು ತಾನೇತಾನಾಗಿ ಹಿಂದೆ ಸರಿಯುತ್ತಾಳೆ. ನಿಸರ್ಗವು ಹೆಣ್ಣು-ಗಂಡುಗಳನ್ನು ಒಂದಕ್ಕೊಂದು ಸಹಾಯ ಮಾಡಲು ಹುಟ್ಟಿಸಿದೆ. ಅದು ಅವರವರ ನಿಸರ್ಗದತ್ತ ರೂಪಕ್ಕೆ ಅನುಗುಣವಾಗಿ ಅವರವರ ಕಾರ್ಯಗಳನ್ನೂ ವಿಭಜಿಸಿದೆ.

(ಹ. 2–12–1939)

* * *

ಹೆಣ್ಣು ಮಕ್ಕಳಿಗೆ ಹಕ್ಕುಗಳಿರಲೇಬೇಕೆಂದು ಹೇಳುವ ಹಟವಾದಿ ನಾನು. ಪುರುಷನಿಗಿಲ್ಲದ ಕಾನೂನಿನ ಬಂಧನಕಕ್ಷೆ ಹೆಣ್ಣುಗಳಿಗೂ ಇರಬಾರದು, ಮಗನಂತೆ ಮಗಳನ್ನೂ ಒಂದೇ ದೃಷ್ಟಿಯಿಂದ ನಾನೂ ನೋಡುತ್ತೇನೆ.

(ಯ.ಇ. 17–10–1929)

* * *

ಹೆಣ್ಣಿನಲ್ಲಿ ಮಾತ್ಸರ್ಯವನ್ನು ಹುಟ್ಟಿಸುವಂಥ ಭೇದಭಾವವನ್ನು ಕಲ್ಪಿಸುವುದು ಒಂದು ಅರಾಜಕತೆಯ ಸ್ಥಿತಿಯ ದ್ಯೋತಕ. ಗಂಡು ಹುಟ್ಟಿದಾಗ ಮಹದಾನಂದವನ್ನು ವ್ಯಕ್ತಪಡಿಸುವ ಮಹೋದಯರು ಹೆಣ್ಣು ಹುಟ್ಟಿದಾಗ ಅದೇತಕ್ಕೆ ವ್ಯಥೆಪಡುವರೋ ನಾನರಿಯೆ! ಇಬ್ಬರೂ ದೇವರ ವರಪ್ರಸಾದದಿಂದ ಹುಟ್ಟಿದವರು. ಅವರಿಬ್ಬರಿಗೂ ಬಾಳಲಿಕ್ಕೆ ಅಷ್ಟಷ್ಟೇ ಅಧಿಕಾರವಿದೆಯಲ್ಲದೆ, ವಿಶ್ವದ ಚಾಲನಕಾರ್ಯದಲ್ಲಿ ಅವರಿಬ್ಬರೂ ಅಷ್ಟಷ್ಟೇ ಮಹತ್ವದ ಪಾತ್ರವನ್ನಾಡಬಲ್ಲರು.

(ಹ. 18–5–1938)

* * *

ಹೆಣ್ಣು ಗಂಡಿಗಿಂತಲೂ ಉದಾರರಾದವರು. ಏಕೆಂದರೆ ಇಂದಿಗೂ ಹೆಣ್ಣು ತ್ಯಾಗದ, ಮೂಕ ವೇದನೆಯ, ನಮ್ರತೆಯ, ನಂಬಿಕೆಯ ಹಾಗು ಜ್ಞಾನದ ಒಂದು ಪ್ರತೀಕವಾಗಿದ್ದಾಳೆ. ಹೆಣ್ಣುಮಕ್ಕಳ ಒಳ ಅರಿವು ಅನೇಕ ಬಾರಿ ಗಂಡುಮಕ್ಕಳ ಗರ್ವಪೂರಿತ ಜ್ಞಾನಕ್ಕಿಂತಲೂ ಮಿಗಿಲಾಗಿದುದೆಂದು ಸಿದ್ಧವಾಗಿದೆ. ಅಂತಲೇ ರಾಮನ ಮೊದಲು ಸೀತೆಯನ್ನು ಹಾಗು ಕೃಷ್ಣನ ಮೊದಲು ರಾಧೆಯನ್ನು ನೆನೆಯುವಲ್ಲಿ ಒಂದು ಮಹದರ್ಥವಿದೆ.

(ಯ.ಇ. 15–9–1921)

* * *

ಸ್ತ್ರೀಯರನ್ನು ದುರ್ಬಲರೆಂದು ಕರೆಯುವುದು ನಿಂದ್ಯಾಸ್ಪದವಿದೆಯಲ್ಲದೆ ಅದು ಪರುಷನು ಅವರಿಗೆ ಮಾಡುವ ಒಂದು ಮಹದನ್ಯಾಯ. ಈ ಬಲವನ್ನು ಪಶುಬಲವೆಂದು ಅರ್ಥಮಾಡಿದರೆ ನಿಜಕ್ಕೂ ಸ್ತ್ರೀಯರು ಈ ಪಶುಸಾಮರ್ಥ್ಯದಲ್ಲಿ ನಿರ್ಬಲರು ಆದರೆ ಈ ಬಲವನ್ನು ನೈತಿಕ ಬಲವೆಂದು ಭಾವಿಸಿದರೆ ಹೆಣ್ಣು ಮಕ್ಕಳು ಗಂಡಸರಿಗಿಂತಲೂ ಆ ಶಕ್ತಿಯಲ್ಲಿ ಸಾವಿರ ಪಾಲು

ಸಮರ್ಥರು. ಅವಳಿಗೇನು ಅಂತರ್ಜ್ಞಾನ ಕಡಿಮೆಯೇ? ಅವಳಲ್ಲೇನು ಸ್ವಾರ್ಥತ್ಯಾಗ ಅತ್ಯಧಿಕವಾಗಿಲ್ಲವೇ? ಅವಳಲ್ಲಿ ಸಹನಶಕ್ತಿ ಅಪಾರವಾಗಿಲ್ಲವೆ? ಅವಳಲ್ಲಿ ಹೆಚ್ಚಿನ ಧೈರ್ಯವಿಲ್ಲವೆ? ಅವಳಿಲ್ಲದೆ ಪುರುಷನೇ ಇಲ್ಲ. ಅಹಿಂಸೆ ನಮ್ಮ ಬಾಳಿನ ತತ್ವವಾದರೆ, ಭವಿಷ್ಯವು ಸ್ತ್ರಿಯರಿಗಾಗಿಯೇ ಕಾದು ನಿಂತಿದೆ.

(ಯ.ಇ. 10–4–1930)

* * *

ಹೆಣ್ಣನ್ನು ನಾನು ಸ್ವಾರ್ಥತ್ಯಾಗದ ಸಾಕ್ಷಾತ್ಕಾರವೆಂದು ತಿಳಿಯುತ್ತೇನೆ. ಆದರೆ ದುರ್ದೈವವಶಾತ್ ಅವಳಿಗೆ ಗಂಡಸರು ತನ್ನಿಂದೆಷ್ಟು ಪ್ರಯೋಜನ ಪಡೆಯುವರೆಂಬುದು ತಿಳಿಯದೇ ಹೋಗಿದೆ. ಟಾಲಸ್ಟಾಯ್‌ರು ಹೇಳುವಂತೆ ಹೆಣ್ಣುಮಕ್ಕಳು ಗಂಡಸರ ಮಾಯಾಜಾಲದಲ್ಲಿ ಶ್ರಮಿಸಹತ್ತಿದ್ದಾರೆ. ಅವರು ಅಹಿಂಸೆಯ ಅರ್ಥವನ್ನು ಸರಿಯಾಗಿ ಮಾಡಿಕೊಂಡರೆ ತಮ್ಮನ್ನು ದುರ್ಬಲರೆಂದು ಕರೆಸಿಕೊಳ್ಳಲು ಅವರೆಂದೂ ಅನುಮತಿಯನ್ನೀಯುತ್ತಿರಲಿಲ್ಲ.

(ಸ್ವರಾಜ್ಯ, ಪು: 40)

○

# ಮಹಿಳೆಯರ ಪುನರುಜ್ಜೀವನ

"ನಮ್ಮ ಶಾಸ್ತ್ರಗಳಲ್ಲಿ ಸ್ತ್ರೀಯರ ನೈಸರ್ಗಿಕ ಹಾಗು ಅವಶ್ಯಕ ವೈಶಿಷ್ಟ್ಯಗಳೆಂದು ವರ್ಣಿಸಲ್ಪಟ್ಟ ದೋಷಗಳನ್ನು ನಿರ್ಮೂಲ ಮಾಡುವ ದಿಸೆಯಲ್ಲಿಯೇ, ಮಹಿಳೆಯರನ್ನು ಪುನರುಜ್ಜೀವಿತಗೊಳಿಸುವ ನಮ್ಮ ಪ್ರಯತ್ನವು ಹೆಚ್ಚಾಗಿ ನಡೆಯಬೇಕು. ಇದನ್ನು ಯಾರು ಮತ್ತು ಹೇಗೆ ಪ್ರಯತ್ನಿಸಬೇಕು? ಈ ಪ್ರಯತ್ನವನ್ನು ಮಾಡಬೇಕಾದರೆ ನಾವು ಸೀತೆ-ದಮಯಂತಿ ಹಾಗು ದ್ರೌಪತಿಯರಂತೆ ಶುದ್ಧ, ಸ್ಥಿರ ಹಾಗು ಆತ್ಮಸಂಯಮವುಳ್ಳ ಸ್ತ್ರೀಯರನ್ನು ನಿರ್ಮಿಸಬೇಕಾಗುವುದು. ನಾವು ಅಂಥವರನ್ನು ನಿರ್ಮಾಣ ಮಾಡಿದರೆ, ಈ ಆಧುನಿಕ ಸೋದರಿಯರಿಗೂ ಕೂಡ, ಪ್ರಾಚೀನ ಕಾಲದಲ್ಲಿ ಅವರ ಆದರ್ಶ ಸ್ತ್ರೀಯರಿಗೆ ಹಿಂದೂ ಸಮಾಜದಿಂದ ದೊರೆಯಲ್ಪಡುವ ಗೌರವದಂತೆಯೇ, ಗೌರವವೂ ದೊರೆಯುವುದು. ಅವರ ಶಬ್ದಗಳಿಗೆ ಶಾಸ್ತ್ರಗಳಷ್ಟೇ ಅಧಿಕಾರವು ಬರುವುದು. ನಮ್ಮ ಸ್ಮೃತಿಗಳಲ್ಲಿ ಅವರ ಬಗ್ಗೆ ಆಗಾಗ್ಗೆ ಬರುವ ನಿಂದೆಯ ಛಾಯೆಗಳನ್ನು ಕಂಡು ನಮಗೆ ನಾಚಿಕೆಯಾದಂತಾಗಿ ನಾವು ಅವುಗಳನ್ನು ಬೇಗನೇ ಮರೆತುಬಿಡಬಹುದು. ಪ್ರಾಚೀನ ಕಾಲದಲ್ಲಿ ಇಂಥ ಕ್ರಾಂತಿಗಳು ಹಿಂದೂ ಧರ್ಮದಲ್ಲಿ ಸಂಭವಿಸಿವೆ ಹಾಗು ಭವಿಷ್ಯತ್ತಿನಲ್ಲಿಯೂ ಅವರ ಪುನರುಜ್ಜೀವನವಾಗಿ ನಮ್ಮ ಧರ್ಮಶ್ರದ್ಧೆಯು ಸ್ಥೈರ್ಯದೆಡೆಗೆ ನಡೆಯಬಹುದು.

ಯಾವ ಆದರ್ಶಗಳನ್ನು ಸಾಧಿಸುವುದರಿಂದ ನಮ್ಮ ಮಹಿಳೆಯರ ಸದ್ಯದ ಪರಿಸ್ಥಿತಿಯು ಸುಧಾರಿಸಬಲ್ಲದೋ ಅಂಥ ಆದರ್ಶಗಳನ್ನು ವಿವೇಚಿಸಿದ್ದೇವೆ. ಅಂಥ ಆದರ್ಶಗಳನ್ನು ಸಾಧಿಸುವಂತಹ

ಮಹಿಳೆಯರ ಸಂಖ್ಯೆ ಖಂಡಿತವಾಗಿಯೂ ಕಡಿಮೆಯಾಗುವುದು. ಆದುದರಿಂದ ಸಾಮಾನ್ಯ ಮಹಿಳೆಯರು ಪ್ರಯತ್ನಿಸಿದರೆ ಏನನ್ನು ಸಾಧಿಸಬಲ್ಲರೆಂಬುದನ್ನು ನಾವೀಗ ಯೋಚಿಸುವಾ. ಸಾಧ್ಯವಿದ್ದಷ್ಟು ಸ್ತ್ರೀಯರ ಮನಸ್ಸಿನಲ್ಲಿ ಅವರ ಸದ್ಯದ ಪರಿಸ್ಥಿತಿಯ ಬಗ್ಗೆ ತಿಳುವಳಿಕೆ ಮೂಡುವಂತೆ ಅವರಲ್ಲಿ ಜಾಗೃತಿಯನ್ನುಂಟುಮಾಡುವುದೇ ನಮ್ಮ ಪ್ರಥಮ ಪ್ರಯತ್ನವಾಗಬೇಕು. ಇಂಥ ಪ್ರಯತ್ನವನ್ನು ಸಾಕ್ಷರತೆಯ ಶಿಕ್ಷಣದ ಮುಖಾಂತರವೇ ಮಾಡಬೇಕೆನ್ನುವ ನಂಬಿಕೆಯುಳ್ಳವರಲ್ಲಿ ನಾನೊಬ್ಬನಲ್ಲ. ಆ ತಳಹದಿಯ ಮೇಲೆ ಕೆಲಸ ಮಾಡುವುದೆಂದರೆ ನಮ್ಮ ಉದ್ದೇಶ ಸಾಧನೆಯನ್ನು ಅನಿಶ್ಚಿತ ಅವಧಿಯವರೆಗೆ ಮುಂದೂಡಿದಂತೆಯೇ ಸರಿ! ಅಷ್ಟು ಹೊತ್ತು ದಾರಿ ಕಾಯುವ ಅವಶ್ಯಕತೆಯಿಲ್ಲವೆಂಬುದನ್ನು ಪ್ರತಿ ಹೆಜ್ಜೆಗೂ ನಾನು ಅನುಭವಿಸಿದ್ದೇನೆ. ನಮ್ಮ ಮಹಿಳೆಯರಿಗೆ ಶಿಕ್ಷಣವನ್ನು ಕೊಡುವ ಮೊದಲು, ಅವರ ವಸ್ತುಸ್ಥಿತಿಯ ದುಃಖದಾಯಕ ಪರಿಸ್ಥಿತಿಗಳ ಅರಿವನ್ನುಂಟು ಮಾಡಿಕೊಡಬೇಕು. ನಮ್ಮ ಹೆಣ್ಣುಮಕ್ಕಳ ಪರಿಸ್ಥಿತಿಯಿಂದಾಗಿಯೇ ನಮ್ಮ ಎಷ್ಟೋ ಚಳವಳಿಗಳು ಅರ್ಧ ದಾರಿಯಲ್ಲಿಯೇ ನಿಂತುಬಿಡುತ್ತಿವೆ. ನಮ್ಮ ಕಾರ್ಯದ ಬಹುಭಾಗವು ಯೋಗ್ಯ ಪರಿಣಾಮಗಳನ್ನು ಕೊಡುವುದಿಲ್ಲ. ವ್ಯಾಪಾರದಲ್ಲಿ ಸಾಕಷ್ಟು ಬಂಡವಾಳವನ್ನು ತೊಡಗಿಸದೆ ಪೈಯ್ಯನ್ನುಳಿಸಲು ಹೋಗಿ ರೂಪಾಯಿಯನ್ನೇ ಕಳೆದುಕೊಳ್ಳುವ ಮೂರ್ಖ ವ್ಯಾಪಾರಸ್ಥನಂತಾಗಿದೆ ನಮ್ಮ ಪರಿಸ್ಥಿತಿ.

ಆದರೆ ಓದು, ಬರಹ, ಗಣಿತ ಈ ಮೂರು ವಿಷಯಗಳ ಪರಿಜ್ಞಾನವಿಲ್ಲದಲೆ, ಬಹಳಷ್ಟು ಒಳ್ಳೆಯ ಹಾಗು ಉಪಯುಕ್ತ ಕಾರ್ಯವಾಗಬಲ್ಲದಾದರೂ, ಅಂಥ ಜ್ಞಾನವಿಲ್ಲದೆ ಕೊನೆಯವರೆಗೂ ನಡೆಯಲಾರದೆಂದು ನಂಬಿದವರಲ್ಲಿ ನಾನೊಬ್ಬ. ಅದು ನಮ್ಮ ಬುದ್ಧಿಯನ್ನು ವಿಕಸಿತಗೊಳಿಸಿ ಹರಿತವಾಗಿ ಮಾಡುತ್ತಿದೆಯಲ್ಲದೆ ಒಳ್ಳೆಯದನ್ನೂ ಮಾಡುವ ನಮ್ಮ ಶಕ್ತಿಯನ್ನು ಹೆಚ್ಚಿಸುತ್ತಿದೆ.

ನಾನೆಂದಿಗೂ ಈ ಮೂರು ವಿಷಯಗಳ ಜ್ಞಾನಕ್ಕೆ ಅವಶ್ಯಕವಾದ ಬೆಲೆಯನ್ನು ಕೊಟ್ಟಿಲ್ಲ. ಅಶಿಕ್ಷಿತನದ ಆಧಾರದ ಮೇಲೆ ಹೆಣ್ಣುಮಕ್ಕಳಿಗೆ ಸಮಾನ ಹಕ್ಕುಗಳನ್ನು ಕೊಡದಿರುವುದು ಅಥವಾ ಅವರಿಂದ ಕಸಿದುಕೊಳ್ಳುವುದು ನ್ಯಾಯಬದ್ಧವಾದದ್ದಲ್ಲವೆಂದು ಪುರುಷರಿಗೆ ನಾನು ಕಾಲಕಾಲಕ್ಕೆ ಎತ್ತಿ ತೋರಿಸಿದ್ದೇನೆ. ಆದರೆ ಈ ಸ್ವಾಭಾವಿಕ ಹಕ್ಕುಗಳನ್ನು ಪಡೆಯಲೂ, ಅವುಗಳನ್ನು ಜಾಣತನದಿಂದ ಉಪಯೋಗಿಸಲೂ ಮತ್ತು ತಮ್ಮ ಬೆಳವಣಿಗೆಗೆ ಕಾರ್ಯ ಮಾಡಲೂ ಶಿಕ್ಷಣವು ತೀರಾ ಅತ್ಯವಶ್ಯಕವಾಗಿದೆ. ಅಲ್ಲದೆ ಯಾರಿಗೆ ಈ ಶಿಕ್ಷಣದ ಕೊರೆಯಿರುವುದೋ ಅಂಥ ಲಕ್ಷಾನುಲಕ್ಷ ಮಂದಿಗೆ ತಮ್ಮ ಆತ್ಮವನ್ನು ಅರಿತುಕೊಳ್ಳುವುದೇ ಸಾಧ್ಯವಿಲ್ಲ. ಅನೇಕ ಗ್ರಂಥಗಳಲ್ಲಿರುವ ನಿಷ್ಕಲಂಕವಾದ ಸಂತೋಷವನ್ನು ಶಿಕ್ಷಣವಿಲ್ಲದೇ ಸವಿಯಲು ಸಾಧ್ಯವಿಲ್ಲ. ಶಿಕ್ಷಣವಿಲ್ಲದ ಮಾನವನಿಗೂ ಮತ್ತು ಪಶುವಿಗೂ ಹೆಚ್ಚು ಭೇದವಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯೆನಿಸಲಾರದು. ಇದರಿಂದ ಸ್ತ್ರೀ ಪುರುಷರ ಶಿಕ್ಷಣಗಳು ಒಂದೇ ರೀತಿಯಲ್ಲಿರಬೇಕೆಂದಲ್ಲ. ಮೊದಲು, ನಮ್ಮ ಪ್ರಾಂತಗಳಲ್ಲಿಯ ಶಿಕ್ಷಣದ ಪದ್ಧತಿಯಲ್ಲಿ ತುಂಬಾ ತಪ್ಪುಗಳಿವೆಯಲ್ಲದೆ ಅದು ಅನೇಕ ವಿಧದಲ್ಲಿ ಕೇಡನ್ನುಂಟು ಮಾಡುವಂಥದಿದೆ. ಹೆಣ್ಣು ಮತ್ತು ಗಂಡು ಇದನ್ನು ತ್ಯಜಿಸಬಿಡಬೇಕು. ಪ್ರಸ್ತುತ ದೋಷಗಳನ್ನು ಶಿಕ್ಷಣದಿಂದ ಕಿತ್ತಿಹಾಕಿದಾಗ್ಯೂ, ಶಿಕ್ಷಣವು ಸ್ತ್ರೀಯರಿಗೆ ಸರ್ವವಿಧದಲ್ಲಿಯೂ ಸರಿಹೋಗುವುದೆಂದು ನಾನು ತಿಳಿಯಲಾರೆ.

ಹೆಣ್ಣುಮಕ್ಕಳ ಶಿಕ್ಷಣದ ಸ್ವರೂಪಗಳನ್ನು ಸಿದ್ಧಪಡಿಸುವಾಗ, ಅವರು ಒಬ್ಬರಿಗೊಬ್ಬರು ಪೂರಕರಿರುವರೆಂಬ ಸತ್ಯವನ್ನು ನೆನಪಿನಲ್ಲಿಟ್ಟುಕೊಂಡು ಕಾರ್ಯಮಾಡಬೇಕು. ಪುರುಷನು ವೈವಾಹಿಕ ಜೀವನದಲ್ಲಿ ಹೆಚ್ಚಿನ ಬಾಹ್ಯ ಚಟುವಟಿಕೆಗಳನ್ನು ಮಾಡುವಲ್ಲಿ ಶ್ರೇಷ್ಠರೆನಿಸಿಕೊಳ್ಳುವುದರಿಂದ, ಅವನಿಗೆ ಹೆಚ್ಚಿನ ಜ್ಞಾನಬರುವಂತೆ ಶಿಕ್ಷಣದ ರೂಪವನ್ನು ಸಿದ್ಧಪಡಿಸಬೇಕು. ಮನೆಯ ಜೀವನ

ಮಹಿಳೆಯರಿಗಾಗಿ ಮೀಸಲಾಗಿರುವುದರಿಂದ, ಮನೆಯ ವಿಷಯದಲ್ಲಿ, ಮಕ್ಕಳನ್ನು ಪೋಷಿಸುವಲ್ಲಿ ಮತ್ತು ಅವರಿಗೆ ಶಿಕ್ಷಣ ಕೊಡಿಸುವಲ್ಲಿ ಅವರಿಗೆ ಹೆಚ್ಚಿನ ಜ್ಞಾನವಿರಬೇಕು. ಇದರರ್ಥ ಜ್ಞಾನದಲ್ಲಿ ಎರಡು ಭಾಗಗಳನ್ನು ಮಾಡಬೇಕೆಂದಲ್ಲ ಅಥವಾ ಜ್ಞಾನದ ಕೆಲ ಭಾಗವು ಕೆಲವರಿಗೆ ಮಾಡಬೇಕೆಂದಲ್ಲ ಅಥವಾ ಜ್ಞಾನದ ಕೆಲ ಭಾಗವು ಕೆಲವರಿಗೆ ಮುಚ್ಚಬೇಕೆಂದಲ್ಲ. ಆದರೆ ಈ ಮೂಲಭೂತ ತತ್ವಗಳನ್ನೊಳಗೊಳ್ಳದೆ ತಾರತಮ್ಯವನ್ನು ಹುಟ್ಟಿಸುವಂಥ ಶಿಕ್ಷಣಪದ್ಧತಿ ಇರುವಷ್ಟು ಕಾಲವೂ ಪುರುಷರ ಹಾಗೂ ಸ್ತ್ರೀಯರ ಪೂರ್ಣ ಜೀವನಾಭಿವೃದ್ಧಿ ಆಗುವುದು ಸಾಧ್ಯವೇ ಇಲ್ಲ.

ನಮ್ಮ ಮಹಿಳೆಯರಿಗೆ ಇಂಗ್ಲೀಷ ಶಿಕ್ಷಣದ ಅವಶ್ಯಕತೆ ಇದೆಯೋ ಇಲ್ಲವೋ ಎಂಬುದನ್ನು ನಾನು ಒಂದೆರಡು ಶಬ್ದಗಳಲ್ಲಿ ಹೇಳಬೇಕೆಂದಿದ್ದೇನೆ. ನಮ್ಮ ಸಾಮಾನ್ಯ ಜೀವನದಲ್ಲಿ ಹೆಣ್ಣಿಗಾಗಲಿ ಅಥವಾ ಗಂಡಿಗಾಗಲಿ ಇಂಗ್ಲೀಷ ಜ್ಞಾನದ ಅವಶ್ಯಕತೆ ಇದೆಯೆಂದು ನನಗಂತೂ ಅನಿಸುವುದಿಲ್ಲವೆಂಬ ನಿರ್ಣಯಕ್ಕೆ ನಾನು ಬಂದಿದ್ದೇನೆ. ಇಂಗ್ಲೀಷು ಹೊಟ್ಟೆಯನ್ನು ಹೊರಕೊಳ್ಳಲು ಹಾಗೂ ನಮ್ಮ ರಾಜಕೀಯ ಚಳವಳಿಯ ಸಂಬಂಧವನ್ನಿಟ್ಟುಕೊಳ್ಳಲು ಅವಶ್ಯವಿದ್ದುದು ಸತ್ಯ ಯಾವ ಮಹಿಳೆಯರಿಗೆ ಇಂಗ್ಲೀಷಜ್ಞಾನದ ಅವಶ್ಯಕತೆಯಿದೆಯೋ ಅಥವಾ ಯಾರಿಗೆ ಇಂಗ್ಲೀಷ ಶಿಕ್ಷಣವನ್ನು ಕಲಿಯಬೇಕೆಂಬ ಆಶೆ ಇದೆಯೋ ಅವರು ನೇರವಾಗಿ ಪುರುಷರಿಗಾಗಿ ತೆರೆದ ಶಾಲೆಗಳನ್ನು ಸೇರಬಹುದು. ಮಹಿಳೆಯರಿಗಾಗಿ ಇಂಗ್ಲೀಷ ಶಿಕ್ಷಣವನ್ನು ಶಾಲೆಯಲ್ಲಿ ಪ್ರಾರಂಭಿಸುವುದೆಂದರೆ ಕೇವಲ ನಿಸ್ಸಹಾಯಕತೆಯನ್ನು ಮುಂದುವರಿಸಿದಂತೆ, ನಾನು ಅನೇಕಸಲ, ಆಂಗ್ಲ ಸಾಹಿತ್ಯದ ಶ್ರೀಯನ್ನು ಹೆಣ್ಣು ಮತ್ತು ಗಂಡಿಗೆ ಒಂದೇ ವಿಧದಲ್ಲಿ ತೆರೆದಿಡಬೇಕೆಂದು ಹೇಳುವುದನ್ನು ಓದಿದ್ದೇನೆ ಹಾಗು ಕೇಳಿದ್ದೇನೆ. ನಾನು ನಮ್ರತೆಯಿಂದ ಹೇಳುವುದೆಂದರೆ ಈ ದೃಷ್ಟಿಕೋನದಲ್ಲಿ ಒಂದು ತಪ್ಪು

ತಿಳಿವಳಿಕೆಯಾಗಿದೆ. ಈ ಸಂಪತ್ತನ್ನು ಪುರುಷರಿಗಾಗಿ ತೆರೆದಿಟ್ಟಿರುವಾಗ, ಮಹಿಳೆಯರಿಗೆ ಅದನ್ನಾರೂ ಮುಚ್ಚಿಡುವುದಿಲ್ಲ. ನಿಮಗೆ ಅದನ್ನು ಓದುವಾಸೆಯಿದ್ದುದಾದರೆ, ಈ ವಿಶ್ವದಲ್ಲಿ ಆ ಸಾಹಿತ್ಯಾಭಾಸವನ್ನು ಪ್ರತಿಬಂಧಿಸಲು ಯಾರೂ ಶಕ್ತರಾಗರು. ಆದರೆ ಸಮಾಜದ ಒಂದು ವಿಶಿಷ್ಟ ದೃಷ್ಟಿಯನ್ನು ಇಟ್ಟುಕೊಂಡು ಶಿಕ್ಷಣ ವಿಧಾನಗಳನ್ನು ಸಿದ್ಧಗೊಳಿಸಬೇಕಾದರೆ, ಸಾಹಿತ್ಯದ ಅಭಿರುಚಿಯನ್ನು ಬೆಳೆಸಿಕೊಂಡು ಬಂದ ಕೆಲವರಿಗೆ ಅವರ ಅವಶ್ಯಕತೆಗಳನ್ನು ಪೂರೈಸುವುದು ಸಾಧ್ಯವಿಲ್ಲ. ಬೇರೆ ವಿಷಯಗಳಿಗಿಂತ ಇಂಗ್ಲೀಷ ಅಭ್ಯಾಸಮಾಡುವಲ್ಲಿ ಹೆಚ್ಚು ಸಮಯವನ್ನು ಹಾಕಬೇಡಿರೆಂದು ನಾನು ಹೆಣ್ಣುಮಕ್ಕಳಿಗೆ ಹೇಳುವುದರ ಅರ್ಥ, ಇಂಗ್ಲೀಷ ಅಭ್ಯಾಸದಿಂದ ಅವರು ಪಡೆಯಬಹುದಾದ ಸಂತೋಷದ ಹಕ್ಕನ್ನು ಕಸಿದುಕೊಳ್ಳುವುದೆಂದಲ್ಲ. ಆದರೆ, ನಾವು ನೈಸರ್ಗಿಕ ಪದ್ಧತಿಯನ್ನು ಅನುಸರಿಸಿದರೆ ಆ ಸಂತೋಷವನ್ನು ಕಡಿಮೆ ಬೆಲೆ ಮತ್ತು ಕಡಿಮೆ ತೊಂದರೆಗಳಲ್ಲಿ ಪಡೆಯಬಹುದೆಂಬ ಅಭಿಪ್ರಾಯದವನು ನಾನಾಗಿದ್ದೇನೆ. ಈ ವಿಶ್ವದಲ್ಲಿ ಅಮೂಲ್ಯವಾದ ಸುಂದರ ರತ್ನಗಳಿವೆ. ಆದರೆ ಇವೆಲ್ಲಾ ಇಂಗ್ಲೀಷ ಕೈವಾಡದ ರತ್ನಗಳಲ್ಲ. ಬೇರೆ ಭಾಷೆಗಳೂ ಇಂಥ ಅಪೂರ್ವಕೃತಿಗಳನ್ನು ಹುಟ್ಟಿಸುತ್ತವೆ. ನಮ್ಮ ಪಂಡಿತರೆಲ್ಲಾ ನಮಗಾಗಿ ನಮ್ಮ ಭಾಷೆಯಲ್ಲಿ ಈ ಕೃತಿಗಳನ್ನೆಲ್ಲಾ ತರ್ಜುಮೆ ಮಾಡಲು ಸಿದ್ಧರಾದರೆ, ಆ ಸಾಹಿತ್ಯದ ಸೊಬಗನ್ನು ನಮ್ಮವರಿಗೂ ತಲುಪುವಂತೆ ಮಾಡಬಹುದು" ಎಂದು 1918 ಫೆಬ್ರುವರಿ ಇಪ್ಪತ್ತರಂದು ಮುಂಬಯಿಯ ಭಗಿನೀ ಸಮಾಜದಲ್ಲಿ ಅದರ ವಾರ್ಷಿಕೋತ್ಸವದ ಸಮಯದಲ್ಲಿ ಮಾತನಾಡುತ್ತ ಹೇಳಿದರು.

○

## ಸ್ತ್ರೀಯರೂ ಸೈನಿಕರಾಗಬಹುದೆ?

ಸೈನಿಕರಾಗಿ ಸ್ತ್ರೀಯರು ಸೇವೆಯನ್ನು ಸಲ್ಲಿಸಬಹುದೆ? ಎಂದು ಅನೇಕ ಸಭೆಗಳಲ್ಲಿ ಗಾಂಧೀಜಿಯವರಿಗೆ ಪ್ರಶ್ನೆ ಹಾಕಿದರು. ಇಟಲಿಯಲ್ಲಿ ನಡೆದ ಖಾಸಗಿ ಸಭೆಯೊಂದರಲ್ಲಿ "ಗಾಂಧೀಜಿ ಭಾರತೀಯ ಹೆಣ್ಣುಮಕ್ಕಳಿಂದ ಇಟಲಿಯ ಹೆಣ್ಣುಮಕ್ಕಳು ಏನಾದರೂ ಕಲಿಯುವಂತಹದಿದ್ದರೆ ಹೇಳಬೇಕು" ಎಂದು ಕೇಳಿದರು.

"ಹೆಣ್ಣುಮಕ್ಕಳು ತಾವು ನಿರ್ಬಲರೆಂಬುದನ್ನು ಮರೆತರೆ" ಎಂದು ಪ್ಯಾರಿಸ್ಸಿನಲ್ಲಿ ಹೇಳುತ್ತ "ಯುದ್ಧದಲ್ಲಿ ಅವರು ಪುರುಷರಿಗಿಂತಲೂ ಹೆಚ್ಚಿನ ಸೇವೆಯನ್ನು ಸಲ್ಲಿಸಬಲ್ಲರೆಂದು ನಾನು ಖಂಡಿತವಾಗಿ ಹೇಳುತ್ತೇನೆ. ಯುದ್ಧಗಳು ನಡೆದಾಗ ನಿಮ್ಮ ಹಿರಿಯ ಸೇನಾನಿಗಳಾಗಲಿ ಅಥವಾ ಮಹಾಮಹಾ ದಂಡನಾಯಕರಾಗಲಿ, ಅವರವರ ಹೆಂಡಂದಿರು, ಹೆಣ್ಣುಮಕ್ಕಳು ಮತ್ತು ಹೆತ್ತವರು ಬೆಂಬಲವನ್ನೀಯದಿದ್ದರೆ ಅವರೇನು ಮಾಡುತ್ತಿದ್ದರೆಂದು ನೀವೇ ಊಹಿಸಿರಿ" ಎಂದರು.

ಲಾರೆನ್ಸದಲ್ಲಿ ಮಾತನಾಡುತ್ತ "ನೀವು ಕೇಳಿದ ಸಮಸ್ಯೆಗೆ ಸಂದೇಶವನ್ನು ಕೊಡುವ ಧೈರ್ಯವು ನನ್ನಲ್ಲಿದೆಯೋ ಇಲ್ಲವೋ ಗೊತ್ತಿಲ್ಲ. ಅವರ ಕೋಪವನ್ನು ಕಟ್ಟಿಕೊಳ್ಳದಂತೆ ನಾನೀ ಕಾರ್ಯಮಾಡಬೇಕಾದರೆ, ಕಳೆದ ವರುಷ ಒಂದೆಡೆ ಕಲೆತ ಎಲ್ಲ ಭಾರತೀಯ ಮಹಿಳೆಯರ ಕಡೆಗೆ ಅವರ ಕಾಲುಗಳನ್ನು ಹೊರಳಿಸುತ್ತಿದ್ದೆ. ಯುರೋಪವು ಅಹಿಂಸೆಯ ಪಾಠವನ್ನು ಕಲಿಯಬೇಕಿದ್ದರೆ ಅದು,

ತನ್ನ ಹೆಣ್ಣುಮಕ್ಕಳ ಮುಖಾಂತರವೇ ಕಲಿಯುಬಲ್ಲದು. ಮಹಿಳೆಯರನ್ನು ನಾನು ಸ್ವಾರ್ಥತ್ಯಾಗದ ಸಾಕ್ಷಾತ್ಕಾರವೆಂದು ಭಾವಿಸುತ್ತೇನೆ. ಆದರೆ ದುರ್ದೈವದಿಂದ ಇಂದವರು ಪುರುಷರಿಗೆ ತಮ್ಮಿಂದೆಷ್ಟು ಪ್ರಯೋಜನವಿದೆಯೆಂಬುದನ್ನು ತಿಳಿಯದೇ ಹೋಗಿದ್ದಾರೆ. ಟಾಲಸ್ಟಾಯರು ಹೇಳುವಂತೆ-ಅವರು ಪುರುಷರ ಮೋಹಜಾಲದಲ್ಲಿ ಶ್ರಮಿಸಹತ್ತಿದ್ದಾರೆ. ಅವರು ಅಹಿಂಸೆಯ ಶಕ್ತಿಯನ್ನು ಅರಿತುಕೊಂಡದ್ದೇ ಆದರೆ, ಅವರೆಂದೂ ಅಶಕ್ತರಾಗರು," ಎಂದು ಹೇಳಿದರು.

ಇಟಲಿಯಲ್ಲಿಯ ಹೆಂಗಳೆಯರ ಗುಂಪಿನೊಂದಿಗೆ ಮಾತನಾಡುತ್ತ "ಪುರುಷನು ವಹಿಸಿದಷ್ಟೇ ಪಾತ್ರವನ್ನು ಸ್ತ್ರೀಯೂ ವಹಿಸುವುದೇ ಅಹಿಂಸಾಯುದ್ಧದ ಸೌಂದರ್ಯ. ಆದರೆ ಹಿಂಸಾತ್ಮಕ ಯುದ್ಧದಲ್ಲಿ ಸ್ತ್ರೀಯರಿಗೆ ಇಂಥ ವಿಶೇಷಾಧಿಕಾರಗಳೇ ಇರುವುದಿಲ್ಲ. ಕಳೆದ ಅಹಿಂಸಾತ್ಮಕ ಸಂಗ್ರಾಮದಲ್ಲಿ ಭಾರತದೊಳಗೆ ಪುರುಷರಿಗಿಂತಲೂ ಸ್ತ್ರೀಯರೇ ಹೆಚ್ಚಾಗಿ ಪರಿಶ್ರಮಿಸಿದ್ದಾರೆ. ಇದರ ಕಾರಣ ತೀರಾ ಸುಲಭವಿದೆ. ಅಹಿಂಸಾತ್ಮಕ ಯುದ್ಧದಲ್ಲಿ ತೊಳಲುವಿಕೆ ಹೆಚ್ಚಿರುತ್ತದೆ. ಅಂತಲೇ ಹೆಣ್ಣು ಮಕ್ಕಳಿಗಿಂತ ಹೆಚ್ಚು ಪರಿಶುದ್ಧವಾಗಿ ಮತ್ತು ಉದಾರವಾಗಿ ಬೇರಾರು ತೊಳಲಬಲ್ಲರು? ಭಾರತೀಯ ಹೆಣ್ಣುಮಕ್ಕಳು ಘೋಷೆಯ ಪರದೆಯನ್ನು ಹರಿದೊಗೆದು ರಾಷ್ಟ್ರಸೇವೆಗಾಗಿ ಮುಂದೆ ಬಂದರು. ತಮ್ಮ ಮನೆಯನ್ನಷ್ಟೇ ನೋಡಿಕೊಂಡರೆ ಸಾಲದು, ತಮ್ಮ ರಾಷ್ಟ್ರವೂ ತಮ್ಮ ಸೇವೆಯನ್ನು ಬಯಸುವುದೆಂದು ಅವರಿಗೆನಿಸಿತು. ಅವರು ಕಾಯ್ದೆಗೆ ವಿರುದ್ಧವಾಗಿ ಉಪ್ಪನ್ನು ಉತ್ಪಾದಿಸಿದರು, ವಿದೇಶಿಯರ ಬಟ್ಟೆಗಳ ಅಂಗಡಿಗಳನ್ನು ಬಹಿಷ್ಕರಿಸಿದರು, ಸೆಂದೀ ಅಂಗಡಿಗಳೆದುರು ಸತ್ಯಾಗ್ರಹ ಮಾಡಿದರು. ಇದಲ್ಲದೆ, ಅವರು ಕೊಳ್ಳುವವರನ್ನು ಕೊಳ್ಳದಂತೆಯೂ ಮತ್ತು ಮಾರುವವರನ್ನು ಮಾರದಂತೆಯೂ ಪ್ರಯತ್ನಿಸಿದರು. ಅಪರಾತ್ರಿಗಳ ಕೂಡ

ಆ ಕುಡುಕರನ್ನು ಸ್ತ್ರೀಯರು ಪ್ರೀತಿ–ಧೈರ್ಯಗಳಿಂದ ಅವರವರ ಮನೆಯವರೆಗೆ ಹೋಗಿ ಮುಟ್ಟಿಸಿ ಬಂದರು. ಅವರು ಸೆರೆಮನೆಗೆ ಹೋದರಲ್ಲದೆ, ಕೆಲ ಪುರುಷರಂತೆ ಲಾಠೀ ಹೊಡೆತಗಳನ್ನು ಸಹಿಸಿಕೊಂಡರು. ಪಾಶ್ಚಿಮಾತ್ಯ ಸ್ತ್ರೀಯರು ಪಶುಗಳಾಗುವಲ್ಲಿ ಪುರುಷರೊಡನೆ ಸ್ಪರ್ಧಿಸಲು ಸಿದ್ಧರಾದರೆ, ಭಾರತೀಯ ಹೆಣ್ಣು ಮಕ್ಕಳಿಂದ ಕಲಿಯುವಂಥ ಪಾಠವು ಅವರಿಗಾವುದೂ ಇಲ್ಲ. ಅವರು ತಮ್ಮ ಗಂಡಂದಿರನ್ನು ಮತ್ತು ಗಂಡುಮಕ್ಕಳನ್ನು ಜನರ ಸಂಹಾರಕ್ಕೆ ಕಳಿಸಿ ಅವರು ಗೆದ್ದಾಗ ಅವರನ್ನು ಅಭಿನಂದಿಸುವಲ್ಲಿ ಪಡುತ್ತಿದ್ದ ಸಂತೋಷದಿಂದ ದೂರವಿರಿಬೇಕಾಗುವುದು.

(ಯ.ಇ. 14–1–1932)



## ಹೆಣ್ಣು ಹೊಟ್ಟೆಗಾಗಿ ದುಡಿಯಬೇಕೆ...?

ಹೆಂಡತಿಯು ಗಂಡನಿಂದ ಬೇರೊಂದು ಸ್ವತಂತ್ರವಾದ ವೃತ್ತಿಯನ್ನು ಅನುಸರಿಸುವುದನ್ನು ನಾನು ಊಹಿಸಲಾರೆ ಕೂಡ! ಅವಳ ಚೇತನಶಕ್ತಿಯೆಲ್ಲವೂ ಮಕ್ಕಳನ್ನು ಪೋಷಿಸುವಲ್ಲಿ ಹಾಗೂ ಮನೆಯನ್ನು ನಡೆಸಿಕೊಂಡು ಹೋಗುವಲ್ಲಿ ಬೇಕೇ ಬೇಕಾಗುತ್ತದೆ. ಸುಸಂಘಟಿತ ಸಮಾಜದಲ್ಲಿ ಸಂಸಾರವನ್ನು ಸಲಹುವ ಭಾರವು ಅವಳ ಮೇಲೆ ಎಂದೂ ಬೀಳಬಾರದು, ಗಂಡಸು ಸಂಸಾರದ ವೆಚ್ಚವನ್ನು ಹೊತ್ತು, ಹೆಂಗಸು ಮನೆಯ ವ್ಯವಸ್ಥೆಯನ್ನು ನಿರ್ವಹಿಸಿಕೊಂಡು ಒಬ್ಬರಿಗೊಬ್ಬರು ಸಹಾಯಕರಾಗಿಯೂ ಹಾಗು ಪೂರಕರಾಗಿಯೂ ನಡೆಯಬೇಕು.

(ಹ. 12–10–1934)

* * *

ಗಂಡು ಹೆಣ್ಣಿನ ವೃತ್ತಿಗಳು ಬೇರೆ ಬೇರೆ ಇರಲೇಬೇಕು. ತಾಯ್ತನದ ಕರ್ತವ್ಯಭಾರವನ್ನು ಹೊರುವ ಹೆಣ್ಣುಮಕ್ಕಳಲ್ಲಿರುವ ವಿಶಿಷ್ಟ ಗುಣಗಳು ಗಂಡಸಿನಲ್ಲಿ ಇರಬೇಕೆಂದಿಲ್ಲ. ಅವಳು ಸೈರಣೆಯ ಮೂರ್ತಿಯಾದರೆ, ಇವನು ಸದಾ ಜಾಗೃತಿಯಲ್ಲಿರುವ ವ್ಯಕ್ತಿ. ಅವಳು ಮನೆಯ ಒಡತಿ, ಇವನು ಮನೆಯ ವೆಚ್ಚಕ್ಕಾಗಿ ದುಡಿಯುವ ಶಕ್ತಿ. ಅವನು ದುಡಿದು ತಂದ ಆಹಾರವನ್ನು ಇವಳು ಸರಿಯಾಗಿ ಹಂಚುವವಳು, ಇವಳು ಎಲ್ಲರ ಯೋಗಕ್ಷೇಮವನ್ನು ನೋಡಿಕೊಳ್ಳುವವಳು. ಮಾನವ ಕುಲದ ಮಕ್ಕಳನ್ನೆಲ್ಲಾ ಪೋಷಿಸುವ ಕಲೆ ಅವಳ ವಿಶೇಷ ಹಾಗು

ಅವಳಿಗಾಗಿಯೇ ಮೀಸಲಾದ ಅವಳ ಸ್ವಾಮ್ಯತ್ವಕ್ಕೆ ಸೇರಿದ ಹಕ್ಕು. ಅವಳ ಆರೈಕೆ ಇಲ್ಲದೇ ಹೋದರೆ ಮಾನವ ಕುಲವೇ ನಿರ್ಮೂಲವಾಗಿ ಹೋಗುತ್ತಿದೆ.

ಸ್ತ್ರೀಯನ್ನು ಒಲೆಯ ಮುಂದೆ ಕೂಡಿಸುವುದನ್ನು ಬಿಟ್ಟು ಆ ಒಲೆಯ ರಕ್ಷಣೆಗಾಗಿ ಕೋವಿಯನ್ನು ಕೊಟ್ಟರೆ ನನ್ನ ಅಭಿಪ್ರಾಯದ ಮೇರೆಗೆ ಅದು ಹೆಣ್ಣು ಗಂಡಿಗಿಬ್ಬರಿಗೂ ಅಗೌರವದ ಮಾತು. ಇದರಿಂದ ನಾವು ಮತ್ತೆ ಅನಾಗರಿಕತೆಗೆ ಮರಳುತ್ತೇವಲ್ಲದೆ, ಅದು ವಿನಾಶದ ನಾಂದಿಯಾಗಿ ಕಾಣಿಸುತ್ತದೆ. ಗಂಡಸು ಹತ್ತುವ ಕುದುರೆಯನ್ನೇ ಅವಳೂ ಹತ್ತಲು ಹೋಗಿ ತಾನು ಬೀಳುವುದಲ್ಲದೆ ಆ ಗಂಡಸನ್ನೂ ಕೆಳಕ್ಕೆ ಕೆಡುವುವಳು. ತನ್ನ ಸಹಚಾರಿಣಿಯನ್ನು ಅವಳ ವಿಶೇಷ ಕರ್ತವ್ಯದಿಂದ ಬೇರೆಯಾಗುವಂತೆ ಒತ್ತಾಯಪಡಿಸಿದ ಅಥವಾ ಮನಒಲಿಸಿದ ಪಾಪವು ಗಂಡಸಿಗೆ ಬಾರದಿರದು. ಮನೆಯನ್ನು ಸುವ್ಯವಸ್ಥಿತವಾಗಿ ಬಿಡುವಲ್ಲಿ ತೋರಿಸುವ ಶೂರತನವು ಏನೂ ಇಲ್ಲದೆ ದಾಳಿಯಾದಾಗ ಮನೆಯನ್ನು ರಕ್ಷಿಸಿದಷ್ಟೇ ಶೂರತನಕ್ಕೆ ಸರಿಹೋಗುತ್ತಿದೆ.

ನಿಸರ್ಗದ ನೆರೆಯಲ್ಲಿ ಶ್ರಮಿಸುವ ಲಕ್ಷಾನುಲಕ್ಷ ಹೆಣ್ಣು ಮಕ್ಕಳನ್ನು ನೋಡಿದಾಗ ಹಾಗೂ ಸೇವಾಗ್ರಾಮದಲ್ಲಿ ನಿತ್ಯವೂ ದುಡಿಯುತ್ತಿರುವ ಒಕ್ಕಲಮಕ್ಕಳನ್ನು ನಿರೀಕ್ಷಿಸಿದಾಗ ಹೆಣ್ಣು ಗಂಡಿನ ಮಧ್ಯದಲ್ಲಿರುವ ಕಾರ್ಯದ ನೈಸರ್ಗಿಕ ವಿಭಜನೆ ನನ್ನ ಲಕ್ಷ್ಯವನ್ನು ಸೆಳೆದಿದೆ. ಕಂಬಾರರಾಗಿಯಾಗಲಿ ಅಥವಾ ಬಡಿಗರಾಗಲಿ ಯಾವ ಹೆಣ್ಣುಮಗಳೂ ಕಾರ್ಯಮಾಡುವುದಿಲ್ಲ. ಆದರೆ ಹೆಣ್ಣು ಮನೆಯನ್ನು ನಡೆಸಿಕೊಂಡು ಹೋಗುತ್ತಾಳೆ. ಅವಳು ಮನೆಯ ಆರ್ಥಿಕ ನೆರವಿಗೆ ಸಹಾಯಕಳಾದರೂ ಮನೆಯ ಪೂರ್ಣ ಆರ್ಥಿಕ ಭಾರವನ್ನು ಗಂಡಸೇ ಹೊರಬೇಕಾಗುವುದು.

ಹೆಣ್ಣುಗಂಡಿನ ಕಾರ್ಯರಂಗಗಳನ್ನು ಬೇರೆಬೇರೆಯಾಗಿ ಗುರುತಿಸಿದರೂ ಅವರಿಬ್ಬರ ಸಾಮಾನ್ಯ ಗುಣಗಳಾಗಲಿ ಹಾಗೂ ಸಂಸ್ಕೃತಿಯಾಗಲಿ ಒಂದೇ ಇರುತ್ತವೆ.

(ಹ. 24–2–1940)

* * *

"ಹೆಣ್ಣಿಗೆ ಒಲೆಯ ಮುಂದೆ ಕೂಡಿಸುವುದನ್ನು ಬಿಟ್ಟು ಆ ಒಲೆಯ ರಕ್ಷಣೆಗಾಗಿ ಕೋವಿಯನ್ನು ಕೊಟ್ಟರೆ ಅದು ಹೆಣ್ಣು ಗಂಡಿಗಿಬ್ಬರಿಗೂ ಅಗೌರವ. ಇದರಿಂದ ನಾವು ಮತ್ತೆ ಅನಾಗರಿಕತೆಗೆ ಮರಳುತ್ತೇವಲ್ಲದೆ ಅದು ಪ್ರಾರಂಭದ ಕೊನೆಯಾಗುತ್ತದೆ" ಎಂದು ನೀವು ಬರೆದಿರುವಿರಿ. ಆದರೆ ಹೊಲದಲ್ಲಿ ಹಾಗೂ ಗಿರಣಿಯಲ್ಲಿ ಕೆಲಸ ಮಾಡುವ ಲಕ್ಷಾವಧಿ ಕೆಲಸಗಾರರ ಗತಿಯೇನು? ಅವರು ಒಲೆಯನ್ನು ಬಿಟ್ಟು ಹೊಟ್ಟೆಯ ಹಿಟ್ಟಿಗಾಗಿ ದುಡಿಯಲೇಬೇಕಾಗುವುದು. ನೀವು ಈ ಔದ್ಯೋಗಿಕ ರಚನೆಯನ್ನು ರದ್ದುಪಡಿಸಿ ಪುನಃ ಶಿಲಾಯುಗಕ್ಕೆ ಮರಳಬಯಸುತ್ತೀರಾ? ಈ ರೀತಿ ಮಾಡುವುದು ಅನಾಗರಿಕತೆಗೆ ಮರಳಿ, ಪ್ರಾರಂಭದ ಕೊನೆಯಾಗುವುದಿಲ್ಲವೆ? ಹೆಣ್ಣು ಮಕ್ಕಳನ್ನು ದುಡಿಯುವಂತೆ ಮಾಡಿ ಪಾಪವನ್ನು ಮಾಡುವ ಪದ್ಧತಿಯನ್ನು ನೀವು ಹೇಗೆ, ಹೊಸ ಸಮಾಜರಚನೆಮಾಡಿ ರದ್ದುಪಡಿಸಬಲ್ಲಿರಿ?"

ಎಂದು ಒಬ್ಬರು ಗಾಂಧೀಜಿಗೆ ಪ್ರಶ್ನೆ ಕೇಳಿದಾಗ ಗಾಂಧೀಜಿ ಈ ರೀತಿ ಹೇಳಿದರು.

ಲಕ್ಷಾವಧಿ ಹೆಣ್ಣುಮಕ್ಕಳು ಒಲೆಯನ್ನು ಬಿಟ್ಟು ಹೊಟ್ಟೆಯ ಪಾಡಿಗಾಗಿ ದುಡಿಯುವುದು ತಪ್ಪಾದರೂ ಕೋವಿಯನ್ನು ಹೊತ್ತು ರಕ್ಷಿಸುವಷ್ಟು ತಪ್ಪಾಗಲಿಕ್ಕಿಲ್ಲ. ಕೂಲಿ ಮಾಡುವಲ್ಲಿ ಆನುವಂಶಿಕವಾಗಿ ಬಂದ ಅನಾಗರಿಕತೆ ಯಾವುದೂ ಇಲ್ಲ. ಹೆಣ್ಣು ಮಕ್ಕಳು ತಮ್ಮ

ಮನೆಯ ಕೆಲಸವನ್ನು ಮಾಡಿಕೊಂಡು ತಮ್ಮ ಹೊಲಗಳಲ್ಲಿ ಕಾರ್ಯ ಮಾಡುವುದನ್ನು ನಾನು ಅನಾಗರಿಕವೆಂದು ಕರೆಯಲಾರೆ. ನನ್ನ ಹೊಸ ರೂಪದ ಸಮಾಜದಲ್ಲಿ, ಎಲ್ಲರೂ ಯಥಾವತ್ತಾಗಿ ತಮ್ಮ ದುಡಿಮೆಯ ತಕ್ಕ ಪ್ರತಿಫಲವು ಬರುವಂತೆ ಶ್ರಮಿಸಬೇಕು. ನನ್ನ ಈ ಹೊಸ ರಚನೆಯಲ್ಲಿ ಹೆಣ್ಣು ಮಗಳ ಪ್ರಾಥಮಿಕ ಕಾರ್ಯ ಮನೆಯನ್ನು ನೋಡಿಕೊಳ್ಳುವುದು ಹಾಗು ಅರ್ಧಾವಧಿ ದಿನದ ಕಾರ್ಯಮಾಡುವುದು. ಕೋವಿಯನ್ನೇ ನಾನು ಸದಾ ರಕ್ಷಣೆಯ ವಸ್ತುವೆಂದು ಭಾವಿಸದೇ ಇದ್ದುದರಿಂದ, ಗಂಡಸರಿಗೂ ಕೂಡ ಅದನ್ನು ಪ್ರತಿಬಂಧಿಸಬೇಕೆಂದು ನನ್ನ ಅಭಿಪ್ರಾಯ. ಅದು ಇರುವವರೆಗೂ, ಅದನ್ನು ಅವಶ್ಯಕ ಅನಿಷ್ಠ ಪದಾರ್ಥವೆಂದು ಸಹಿಸಲೇಬೇಕು. ಆದರೆ ಸ್ತ್ರೀಯರನ್ನು ಮಾತ್ರ ಆ ಅನಿಷ್ಟದಿಂದ ಉದ್ದೇಶಪೂರ್ವಕವಾಗಿಯೇ ಮಲಿನರನ್ನಾಗಿ ಮಾಡಲಾರೆ.

(ಹ. 16–3–1940)



# ಸ್ತ್ರೀಯರು ಮತ್ತು ಸ್ವಾತಂತ್ರ್ಯ

"ಭಾರತೀಯ ಹೆಣ್ಣುಮಕ್ಕಳಲ್ಲಿ ಉಂಟಾಗಿರುವ ಸಾಮಾಜಿಕ ಮತ್ತು ರಾಜಕೀಯ ಪ್ರಜ್ಞೆ ಅವರ ಸಾಂಪ್ರದಾಯಿಕ ಗೃಹಕೃತ್ಯಗಳ ಮತ್ತು ಸಮಾಜ ಕರ್ತವ್ಯಗಳ ಮಧ್ಯೆ ಒಂದು ಮತಭೇದವನ್ನೇ ಹುಟ್ಟಿಸಿವೆ. ಹೆಣ್ಣುಮಗಳು ಸಾರ್ವಜನಿಕ ಕಾರ್ಯದಲ್ಲಿ ನಿರತಳಾದರೆ ಅವಳು ಮಕ್ಕಳನ್ನಾಗಲಿ ಅಥವಾ ಮನೆಯನ್ನಾಗಲಿ ನಿರ್ಲಕ್ಷಿಸಲೇಬೇಕಾಗುವುದು. ಅದಕ್ಕೆ ಈ ಸಮಸ್ಯೆಯನ್ನು ಅದು ಹೇಗೆ ಪರಿಹರಿಸಬೇಕು? ಎಂದು ಒಬ್ಬರು ಗಾಂಧೀಜಿಗೆ ಕೇಳಿದರು.

ಅನೇಕ ಸಲ ಹೆಣ್ಣುಮಗಳ ಕಾಲವು ಆವಶ್ಯಕ ಗೃಹಕೃತ್ಯಗಳ ಸಲುವಾಗಿ ವ್ಯಯವಾಗದೆ, ಅದು ಅವಳ ಪತಿಯ ಆತ್ಮಪ್ರಶಂಸೆಯ ಆನಂದಕ್ಕೂ ಮತ್ತು ತನ್ನ ಒಯ್ಯಾರಕ್ಕೂ ವ್ಯಯವಾಗುತ್ತಿದೆ. ಹೆಣ್ಣುಮಕ್ಕಳ ಈ ಗೃಹಸಂಸಾರದ ಗುಲಾಮಗಿರಿಯು ನನಗೆ ನಮ್ಮ ಅನಾಗರಿಕತೆಯ ಸಂಕೇತವಾಗಿ ಕಾಣುತ್ತಿದೆ. ಅಡುಗೆಮನೆಯಲ್ಲಿ ಗುಲಾಮಳಾಗಿ ಉಳಿಯುವುದು. ನಮ್ಮ ಅನಾಗರಿಕತೆಯ ಅವಶೇಷವೆಂದು ನನ್ನ ಅಭಿಪ್ರಾಯವಿದೆ. ಈ ದುಷ್ಟ ನಿದ್ರೆಯಿಂದ ಹೆಣ್ಣುಮಕ್ಕಳು ಏಳುವಂತೆ ಮಾಡುವುದು ದುಸ್ತರವಾದದ್ದು. ಮನೆಗೆಲಸ ಹೆಣ್ಣುಮಕ್ಕಳ ಇಡೀ ದಿನವನ್ನೆಲ್ಲಾ ತೆಗೆದುಕೊಳ್ಳಬಾರದು" ಎಂದು ಗಾಂಧೀಜಿ ಉತ್ತರಿಸಿದರು.

"ಮಹಿಳೆಯರಿಗೆ ಆಸ್ತಿಗಳನ್ನು ಪಡೆಯುವ ಹಕ್ಕುಗಳಿರಬೇಕೆಂಬ ಬಗ್ಗೆ ಕಾನೂನು ಬಂದಾಗ ಅದನ್ನು ವಿರೋಧಿಸಿದ್ದಾರೆ. ಕಾರಣದ

ಆರ್ಥಿಕ ಸ್ವಾತಂತ್ರ್ಯವನ್ನು ಮಹಿಳೆಯರಿಗೆ ಕೊಟ್ಟುದಾದರೆ ಅನೀತಿ ಹೆಚ್ಚು ಪಸರಿಸುವುದಲ್ಲದೆ ಗೃಹಸ್ವಾಸ್ಥವೇ ಇಲ್ಲದಂತಾಗುತ್ತದೆ. ಈ ಪ್ರಶ್ನೆಯ ಬಗ್ಗೆ ನೀವಾವ ದೃಷ್ಟಿಕೋನವನ್ನು ತಳೆಯುತ್ತೀರಿ, ಗಾಂಧೀಜಿ? ಎಂದೊಬ್ಬರು ಪ್ರಶ್ನಿಸಿದರು.

"ಈ ಪ್ರಶ್ನೆಗೆ ನನ್ನದೊಂದು ಮರುಪ್ರಶ್ನೆಯಿದೆ. ಪುರುಷನಿಗೆ ಸಿಕ್ಕ ಸ್ವಾತಂತ್ರ್ಯ ಹಾಗೂ ಆಸ್ತಿಯ ಮೇಲಿನ ಹಕ್ಕು ಅವನು ಹೆಚ್ಚು ಅನೀತಿಯನ್ನು ಪಸರಿಸುವಂತಾಗಿಲ್ಲವೆ? ಇದಕ್ಕೆ ನೀವು 'ಹೌದು' ಎಂದರೆ ಹೆಣ್ಣುಮಕ್ಕಳಿಂದಲೂ ಹಾಗೆಯೇ ಆಗುತ್ತಿದೆ ಎಂದಿಟ್ಟುಕೊಳ್ಳುವಾ. ಆಸ್ತಿಗಳನ್ನು ಪಡೆಯುವ ಹಕ್ಕು ಹಾಗು ಪುರುಷರ ಬೇರೆ ಹಕ್ಕುಗಳನ್ನೆಲ್ಲಾ ಮಹಿಳೆಯರಿಗೆ ದೊರಕಿಸಿಕೊಟ್ಟುದಾದರೆ, ಅದನ್ನವರು ಭೋಗಿಸುವುದರಿಂದ, ಅದರಿಂದ ಪರಿಣಾಮವು ಅವರ ನೀತಿ ಅಥವಾ ಅನೀತಿಯ ಮೇಲೆ ಆಗುವುದಿಲ್ಲ. ಸ್ತ್ರೀಯರ ಅಥವಾ ಪುರುಷರ ಅನೀತಿ ಅವರವರ ಅಸಹಾಯಕತೆಯ ಮೇಲೆ ಅವಲಂಬಿಸಿರುವುದರಿಂದ ಇದಕ್ಕೂ ಅದಕ್ಕೂ ಯಾವ ಸಂಬಂಧವೇ ಇಲ್ಲ. ನೀತಿ ವ್ಯಕ್ತಿಯ ಅಂತಃಕರಣದ ಅಶುದ್ಧಿಯಲ್ಲಿ ಬೇರೂರಿ ನಿಂತಿದೆ.'

(ಹ. 8-6-1940)



# ಆಧುನಿಕ ಯುವತಿ

ಹನ್ನೊಂದು ಹುಡುಗಿಯರ ಪರವಾಗಿ ಬರೆದ ಕಾಗದವು ನನಗೆ ಬಂದಿದೆ. ಆ ಹುಡುಗಿಯರ ಹೆಸರು ಹಾಗು ವಿಳಾಸಗಳು ಅದರಲ್ಲಿವೆ. ನಾನಿಲ್ಲಿ ಆ ಕಾಗದದ ಅರ್ಥಕ್ಕೆ ಯಾವ ಬಾಧೆ ಬಾರದಂತೆ ಹೆಚ್ಚು ಪರಿಣಾಮಕಾರಿಯಾಗಲು ಅಲ್ಲಲ್ಲಿ ಬದಲಿಸಿ ಕೊಟ್ಟಿದ್ದೇನೆ.

"ಓರ್ವ ವಿದ್ಯಾರ್ಥಿನಿಯು ವಿದ್ಯಾರ್ಥಿಗಳ ನಾಚಿಕೆಗೇಡುತನ" ಎಂಬ ತಲೆಬರಹದ ಕೆಳಗೆ ಬರೆದ ಕಾಗದದ ಬಗ್ಗೆ ನೀವು 1938 ಡಿಸೆಂಬರ್ 31ರಂದು 'ಹರಿಜನ'ದಲ್ಲಿ ಮಾಡಿದ ಟೀಕೆಗಳು ವಿಶೇಷ ಲಕ್ಷ್ಯವನ್ನು ಸೆಳೆಯುತ್ತಿವೆ. ಈ ಆಧುನಿಕ ಯುವತಿ ನಿಮ್ಮನ್ನು ಎಷ್ಟು ರೇಗಿಗೆಬ್ಬಿಸಿದ್ದಾಳೆಂದರೆ, ನೀವು ಕೊನೆಯಲ್ಲಿ ಅವಳನ್ನು 6 ಮಂದಿ ರೋಮಿಯೋಗಳ ಜೊತೆ ಅಲೆದಾಡುವ ಒಬ್ಬ ಜ್ಯುಲಿಯಟ್‌ಳೆಂದು ಭಾವಿಸಿದಂತೆ ಕಂಡುಬರುತ್ತಿದೆ. ಸಾಮಾನ್ಯತಃ ಮಹಿಳೆಯರ ಬಗ್ಗೆ ನೀವಿರಿಸಿಕೊಂಡ ವಿಚಾರಗಳಿಗೆ ದ್ರೋಹ ಬಗೆಯುವಂಥ ಈ ನಿಮ್ಮ ಅಭಿಪ್ರಾಯವು ಅಷ್ಟು ಸ್ಫೂರ್ತಿದಾಯಕವಲ್ಲ.

ಇತ್ತೀಚೆಗೆ ಮಹಿಳೆಯರು ಮುಚ್ಚಿದ ಮನೆಗಳಿಂದ ಹೊರಕ್ಕೆ ಬಂದು ಪುರುಷಜೀವನದ ಅರ್ಥಭಾರ ಹೊತ್ತು ಅವರಿಗೆ ಸಹಾಯ ಮಾಡಲಿಕ್ಕೆ ಹೊರಗೆ ಬಂದಾಗ್ಯೂ, ಅವರನ್ನು ಪುರುಷರು ಕೆಟ್ಟರೀತಿಯಿಂದ ನಡೆಸಿಕೊಂಡಾಗ ಅದರ ದೋಷವನ್ನು ಆ ಮಹಿಳೆಯರ ತಲೆಗೆ ಕಟ್ಟುವುದು ನನಗೆ ವಿಚಿತ್ರವಾಗಿ ಕಾಣಹತ್ತಿದೆ. ತಪ್ಪು ಇಬ್ಬರದು ಅಷ್ಟಷ್ಟೇ ಇರುವವೆಂಬ ಉದಾಹರಣೆಗಳಿದ್ದ ಸಂಗತಿಗಳನ್ನು ಅಲ್ಲಗೆಳೆಯುವುದು ಸಾಧ್ಯವಿಲ್ಲ. ಆರಾರು ಮಂದಿ

ರೋಮಿಯೋಗಳ ಜೊತೆ ಅಲೆಯುವ ಜ್ಯೂಲಿಯಟ್‌ಳಂಥ ಹುಡುಗಿಯರು ಕೆಲವರು ಇರಬಹುದು. ಈ ಸಂಗತಿ 6 ಮಂದಿ ರೋಮಿಯೋಗಳು ಅಸ್ತಿತ್ವದಲ್ಲಿರುವರೆಂಬದನ್ನು ಸಿದ್ಧಮಾಡುವುದು. ಅದಲ್ಲದೆ ಅವರೆಲ್ಲರೂ ಜ್ಯೂಲಿಯಟ್‌ಳಿಗಾಗಿ ಓಣಿ ಓಣಿಗಳನ್ನು ಅಲೆದಾಡುವರೆಂಬುದೂ ಸಿದ್ಧವಾದಂತಾಗುವುದು. ಇದರಿಂದ ನಿರ್ದಿಷ್ಟವಾಗಿ ಆಧುನಿಕ ಯುವತಿಯರೆಲ್ಲಾ ಜ್ಯುಲಿಯೆಟ್‌ರೆಂದೂ ಹಾಗೂ ಆಧುನಿಕ ಯುವಕರೆಲ್ಲಾ ರೋಮಿಯೋಗಳೆಂದು ಹೇಳಲಿಕ್ಕೆ ಬಾರದು. ನೀವು ಅನೇಕ ಆಧುನಿಕ ಯುವತಿಯರ ಸಂಪರ್ಕದಲ್ಲಿ ಬಂದು ಅವರ ನಿರ್ಧಾರ, ಸ್ವಾರ್ಥತ್ಯಾಗ ಹಾಗೂ ಪರಿಶುದ್ಧ ಗುಣಗಳನ್ನು ಕಂಡುಕೊಂಡಿದ್ದೀರಿ.

ನಿಮ್ಮ ಸುದ್ದಿಗಾರನು ಎತ್ತಿ ತೋರಿಸಿದಂತೆ ಇಂಥ ದುರ್ನಡತೆಗಳ ಬಗ್ಗೆ ಸಾರ್ವಜನಿಕ ಅಭಿಪ್ರಾಯವನ್ನು ಸಂಘಟಿಸುವುದು ಹುಡುಗಿಯರ ಕೆಸಲವಲ್ಲ, ಅಲ್ಲದೆ ಇದರಿಂದ ಯಾವ ಪರಿಣಾಮವೂ ಆಗದ್ದಕ್ಕೆ ಅವರು ಶುಷ್ಕವಾಚಿಕೆಯನ್ನೂ ತೋರಿಸುವುದೂ ಆಗದ ಮಾತು.

"ಆದರೆ ನಿಮ್ಮಂಥ ಮಹಾತ್ಮರ ಒಂದು ಪ್ರಕಟಣೆಯಿಂದ ಜಗತ್ತಿನ ತುಂಬಾ ಹೆಣ್ಣು ನರಕದ ಹಾದಿ" ಎಂಬ ಜೀರ್ಣವಾದ ಮತ್ತು ಅನುಚಿತವಾದ ಹೇಳಿಕೆಯ ಬಗ್ಗೆ ಮತ್ತೊಮ್ಮೆ ಸಮರ್ಥನೆ ದೊರೆಯುತ್ತಿದೆ.

ಈ ಮೊದಲಿನ ಹೇಳಿಕೆಗಳ ಮೇಲಿಂದ, ನೀವು ದಯವಿಟ್ಟು ಆಧುನಿಕ ಯುವತಿಯರು ನಿಮ್ಮ ಬಗ್ಗೆ ಗೌರವವನ್ನು ಇಟ್ಟುಕೊಂಡಿಲ್ಲವೆಂದು ನಿರ್ಣಯಿಸಬೇಡಿರಿ. ಅವರೂ, ಪ್ರತಿಯೊಬ್ಬ ಯುವಕನು ನಿಮ್ಮ ಬಗ್ಗೆ ಇಟ್ಟುಕೊಂಡಷ್ಟೇ ಗೌರವವನ್ನು ಇಟ್ಟುಕೊಂಡಿದ್ದಾರೆ. ದ್ವೇಷಿಸುವ ಬಗ್ಗೆಯಾಗಲಿ ಅಥವಾ ಕನಿಕರ ತೋರಿಸುವ ಬಗ್ಗೆಯಾಗಲಿ ಅವರು ಮುನಿದುಕೊಳ್ಳುತ್ತಾರೆ. ಅವರಲ್ಲಿ ದೋಷವಿದ್ದುದೇ ಆಗಿದ್ದರೆ ಅವರು ಅದನ್ನು ತಿದ್ದಿಕೊಳ್ಳಲು ಸಿದ್ಧರೇ ಇರುವರು. ಅವರನ್ನು ಶಾಪಕ್ಕೆ ಗುರಿಮಾಡುವ ಮೊದಲೇ, ಅವರಲ್ಲಿ ಏನಾದರೂ ತಪ್ಪಿದ್ದರೆ ಅದನ್ನು ನಿರ್ಣಾಯಕ ರೀತಿಯಲ್ಲಿ

ಸಿದ್ಧಪಡಿಸಬೇಕು. ಹೀಗೆ ಮಾಡುವುದರಿಂದ ಅವರು "ಪಾಪ ಹೆಣ್ಣು ಮಕ್ಕಳು" ಎಂಬ ನೆರಳಿನ ಕೆಳಗೆ ರಕ್ಷಣೆ ಪಡೆಯಲು ಮನಸ್ಸು ಮಾಡರು ಅಥವಾ ನ್ಯಾಯಾಧೀಶನು ಹೆಂಗಳೆಯರ ಎದುರಿನಲ್ಲಿಯೇ ಅವರನ್ನು ಆಪಾದಿಸಿದರೆ ಅದನ್ನು ಅವರು ಮೌನವಾಗಿ ನೋಡುತ್ತಲೂ ನಿಲ್ಲರು. ಸತ್ಯವನ್ನು ಯಾವಾಗಲೂ ಎದುರಿಸಲೇಬೇಕು. ಅಂಥ ಸತ್ಯವನ್ನು ಎದುರಿಸುವಷ್ಟು ಧೈರ್ಯವು ಆಧುನಿಕ ಯುವತಿಗೆ ಅಥವಾ ನೀವು ಕರೆಯುವ 'ಜೂಲಿಯಟ್'ಳಿಗೆ ಇದೆ."

ಈ ಪತ್ರವನ್ನು ಪ್ರಕಟಿಸಿ ಗಾಂಧೀಜಿ ಅದಕ್ಕೆ ಈ ರೀತಿ ಉತ್ತರವನ್ನು ಕೊಟ್ಟಿದ್ದಾರೆ.

ನನ್ನ ಈ ಸುದ್ದಿಗಾರರು ಬಹುಶಃ ಹುಟ್ಟದಿದ್ದಾಗ, ನಲವತ್ತು ವರುಷಗಳ ಪೂರ್ವದಲ್ಲಿಯೇ ನಾನು ದಕ್ಷಿಣ ಆಫ್ರಿಕೆಯಲ್ಲಿರುವಾಗ ಭಾರತೀಯ ಹೆಣ್ಣುಮಕ್ಕಳ ಸೇವೆಯನ್ನು ಪ್ರಾರಂಭಿಸಿದೆನೆಂದು ಅವರಿಗೆ ಒಂದು ಪಕ್ಷಕ್ಕೆ ಗೊತ್ತಿರಲಿಕ್ಕಿಲ್ಲ. ಸ್ತ್ರೀತ್ವಕ್ಕೆ ಅಗೌರವವು ಆಗುವ ರೀತಿಯಲ್ಲಿ ಬರೆಯಲು ನಾನು ಅಸಮರ್ಥನಿರುವೆನು. ಅವರ ಬಗ್ಗೆ ನನ್ನಲ್ಲಿರುವ ಗೌರವವು ಎಷ್ಟು ಅಪಾರವಾಗಿದೆಯೆಂದರೆ; ಅದು ಎಂದಿಗೂ ಅವರ ಬಗ್ಗೆ ಕೆಟ್ಟದ್ದನ್ನು ವಿಚಾರಿಸಲು ಅನುಮತಿಯನ್ನೀಯಲಾರದು. ಅವಳು, ಇಂಗ್ಲೀಷಿನಲ್ಲಿ ವರ್ಣಿಸಿರುವ "ಹೆಣ್ಣು" ಮನುಕುಲದ ಅರ್ಧಾಂಗಿ ಎಂಬಂತೆಯೇ ಇರುವಳು. ನನ್ನ ಲೇಖನದ ಉದ್ದೇಶ ವಿದ್ಯಾರ್ಥಿಗಳ ನಾಚಿಕೆಗೇಡುತನವನ್ನು ಹೊರಗೆಡುವುದೇ ಆಗಿತ್ತೇ ವಿನಾ, ಹುಡುಗಿಯರ ಮನೋದೌರ್ಬಲ್ಯವನ್ನು ಪ್ರಚಾರ ಮಾಡುವುದು ಆಗಿದ್ದಿರಲಿಲ್ಲ.

ಒಂದು ಬೇನೆಯ ಸರಿಯಾದ ಪರಿಹಾರವನ್ನು ಶೋಧಿಸಲೇಬೇಕಿದ್ದರೆ, ಆ ಬೇನೆಯ ಲಕ್ಷಣಗಳನ್ನು ಗುರುತಿಸುವಾಗ ಆ ಬೇನೆ ಯಾವ ಘಟನೆಗಳಿಂದ ಉದ್ಭವಿಸಿರುವುದೆಂದು ಹೇಳುವಂತೆ ನಾನೀ ಘಟನೆಯ ಪರಿಹಾರವನ್ನು ಸೂಚಿಸುವಾಗ ಅದರ ಸುತ್ತಲಿನ ಚಿತ್ರವನ್ನೆಲ್ಲಾ ಕೊಡಬೇಕಾಯಿತು.

'ಆಧುನಿಕ ಯುವತಿ' ಎಂಬುವಲ್ಲಿ ಒಂದು ವಿಶೇಷ ಅರ್ಥವಿದೆ. ಆದಕಾರಣ ನನ್ನ ಟೀಕೆ ಕೆಲವರಿಗಷ್ಟೇ ಪರಿಮಿತಿಗೊಳ್ಳುವುದರಲ್ಲಿ ಯಾವ ಅರ್ಥವಿಲ್ಲ. ಆದರೆ ಇಂಗ್ಲೀಷ ಶಿಕ್ಷಣವನ್ನು ಪಡೆದ ಹುಡುಗಿಯರೆಲ್ಲ ಆಧುನಿಕ ಯುವತಿಯರಲ್ಲ. ಆಧುನಿಕ ಯುವತಿಯರ ಭಾವನೆಯಿಂದ ದೂರಿದ್ದ ಅನೇಕ ಯುವತಿಯರಿರುವರೆಂದು ನನಗೆ ಗೊತ್ತಿದೆ. ಆದರೆ ಕೆಲವರು ಆಧುನಿಕ ಯುವತಿಯರೂ ಆಗಿದ್ದಾರೆ. ಗಂಭೀರ ಕೆಡಕನ್ನುಂಟು ಮಾಡುವಂಥ ಗೊಂದಲಮಯ ಸಮಸ್ಯೆಯನ್ನು ಉದ್ಭೂತಗೊಳಿಸುವ ಆಧುನಿಕ ಯುವತಿಯನ್ನು ಅನುಕರಣ ಮಾಡಬಾರದೆಂಬ ಬಗ್ಗೆ ನನ್ನ ಟೀಕೆ ಗುರಿಯಾಗಿತ್ತು. ಇದೇ ಸಮಯಕ್ಕೆ ಆಂಧ್ರದ ವಿದ್ಯಾರ್ಥಿಗಳು ತೋರಿಸಿದ ದುರ್ನಡತೆಯನ್ನೆತ್ತಿ ಆಂಧ್ರದ ವಿದ್ಯಾರ್ಥಿನಿಯೊಬ್ಬಳಿಂದ ಕಾಗದವು ಬಂದಿತ್ತು. ಅವಳ ಕಾಗದದ ವರ್ಣನೆಯಿಂದ ಆಂಧ್ರ ವಿದ್ಯಾರ್ಥಿಗಳ ನಡತೆ ಲಾಹೋರ ವಿದ್ಯಾರ್ಥಿಗಳ ನಡತೆಗಿಂತಲೂ ಕೀಳಾಗಿತ್ತೆಂದು ತಿಳಿದುಬರುತ್ತದೆ. ಈ ಆಂಧ್ರದ ಹುಡುಗಿ "ನನ್ನ ಸ್ನೇಹಿತೆಯರ ಸಾದಾ ಬಟ್ಟೆ ಅವರ ಯಾವ ಸಂರಕ್ಷಣೆಗೆ ಸಹಾಯವನ್ನೂ ಮಾಡದು. ಅದಲ್ಲದೆ, ವಿದ್ಯಾರ್ಥಿಗಳು ಯಾವ ಸಂಸ್ಥೆಯಲ್ಲಿರುತ್ತಾರೋ ಆ ಸಂಸ್ಥೆಗೆ ಅಪಮಾನವನ್ನೆಸಗುವ ಹಾಗೆ ಪ್ರದರ್ಶಿಸುವ ಅವರ ಅನಾಗರಿಕತೆಯನ್ನು ಹೊರಗೆಡುವವಷ್ಟು ಧೈರ್ಯವೂ ನನ್ನ ಸ್ನೇಹಿತೆಯರಿಗಿಲ್ಲ" ಎಂದು ಹೇಳಿದ್ದಾಳೆ.

ನಾನು ಈ ಹನ್ನೊಂದು ವಿದ್ಯಾರ್ಥಿನಿಯರು ತಮಗೆ ವಿದ್ಯಾರ್ಥಿಗಳು ತೋರಿಸಿದ ದುರ್ನಡತೆಯ ವಿರುದ್ಧ ಯುದ್ಧಹೂಡಲು ಸಿದ್ಧರಾಗಬೇಕೆಂದು ಆಹ್ವಾನವನ್ನೀಯುತ್ತೇನೆ. ಪುರುಷರು ತೋರಿಸುವ ಈ ಚಂಡಾಲ ನಡತೆಯ ವಿರುದ್ಧ ತಮ್ಮನ್ನು ತಾವೇ ರಕ್ಷಿಸಿಕೊಳ್ಳುವ ಕಲೆಯನ್ನು ಹುಡುಗಿಯರು ಕಲಿಯಲೇಬೇಕು.

(ಬಾರ್ಡೋಲಿ, 30-1-1939)



## ಆಭರಣಗಳು ಹೆಂಗಳೆಯರ ಶೃಂಖಲೆಗಳು

ಮಹಿಳೆ ತಾನು ಪುರುಷನ ವಿಷಯವಾಸನೆಯ ವಸ್ತುವೆಂದು ಎಂದಿಗೂ ಭಾವಿಸಬಾರದು. ಅವಳು ಪುರುಷನ ಸರಿಯಾದ ಪಾಲುಗಾರಳಾಗಿದ್ದುದೇ ಇದ್ದರೆ, ಅವಳು ಗಂಡನನ್ನೊಳಗೊಂಡು ಯಾವ ಪುರುಷನಿಗೂ ಶೃಂಗರಿಸಿಕೊಳ್ಳಲು ಸಿದ್ಧಳಾಗಬಾರದು. ಸೀತೆ ತನ್ನ ಶಾರೀರಿಕ ವೈಖರಿಯಿಂದ ರಾಮನನ್ನು ಸಂತೋಷಗೊಳಿಸಲು ಒಂದು ನಿಮಿಷವನ್ನೂ ವ್ಯಯಿಸಿರಬಹುದೆಂದು ನಾನು ಕಲ್ಪಿಸಲಾರೆ.

(ಯ.ಇ. 21–7–1921)

* * *

ಈ ವಿಶ್ವವ್ಯಾಪಾರದಲ್ಲಿ ನೀವು ನಿಮ್ಮ ಪಾತ್ರವನ್ನಾಡಬೇಕಿದ್ದರೆ, ಪುರುಷರನ್ನು ಸಂತೋಷಗೊಳಿಸಲು ನೀವೆಂದೂ ಶೃಂಗರಿಸಿಕೊಳ್ಳಲು ಸಿದ್ಧರಾಗಬಾರದು. ನಾನು ಹೆಣ್ಣಾಗಿ ಹುಟ್ಟಿದ್ದರೆ, ಹೆಣ್ಣು, ಪುರುಷನ ಆಟದ ಗೊಂಬೆಯಾಗಿ ಹುಟ್ಟಿರುವಳೆಂದು ತಿಳಿಯುವ ಪುರುಷರ ಮನಸ್ಸಿನ ವಿರುದ್ಧವಾಗಿ ವಿರೋಧವಾಗಿ ಕ್ರಾಂತಿಯನ್ನೇ ಎಬ್ಬಿಸುತ್ತಿದ್ದೆ. ನಾನು ಹೆಣ್ಣು ಹೃದಯವನ್ನು ಅಪಹರಿಸಲು ಮಾನಸಿಕವಾಗಿ ಹೆಣ್ಣೇ ಆಗಿದ್ದೇನೆ. ನನ್ನ ಹೆಂಡತಿಯನ್ನು ನಾನು ಮೊದಲು ನಡೆಸಿಕೊಳ್ಳುತ್ತಿದ್ದ ರೀತಿಯಲ್ಲಿ ಬದಲುಮಾಡದೆ ನನಗೆ ಅವಳ ಹೃದಯವನ್ನೇ ಅಪಹರಿಸುವುದು ಸಾಧ್ಯವಾಗಲಿಲ್ಲ. ಅಂತಲೇ ಗಂಡನಾದ ನಾನು ನನ್ನ ಹಕ್ಕುಗಳನ್ನೆಲ್ಲಾ ಅವಳಿಗಾಗಿ ಬಿಟ್ಟುಕೊಟ್ಟೆ. ಇಂದವಳು ನನ್ನಷ್ಟೇ

ಸಾದಾ ಜೀವಿಯಾಗಿರುವುದನ್ನು ನೀವು ನೋಡಬಹುದು. ಇಂದು ಅವಳ ಮೇಲೆ ಯಾವ ಸರಗಳನ್ನಾಗಲಿ ಅಥವಾ ಅವಳ ಮೇಲೆ ಬೇರಾವ ಶೃಂಗಾರದ ವಸ್ತುಗಳನ್ನಾಗಲಿ ನೀವು ನೋಡಲಾರಿರಿ. ನೀವು ಹಾಗೆಯೇ ಆಗಬೇಕೆಂದು ನನ್ನಿಚ್ಛೆ. ನೀವು ನಿಮ್ಮ ರಾಗಗಳ ಹಾಗು ಪುರುಷರ ದಾಸರಾಗಬೇಡಿರಿ. ನೀವು ನಿಮ್ಮನ್ನು ಅಲಂಕರಿಸಿಕೊಳ್ಳಲು ಹೋಗಬೇಡಿರಿ. ನೀವು ಸುವಾಸನೆಯ ತೈಲದಾಸೆಗೆ ಬಲಿಬೀಳಬೇಡಿರಿ. ನೀವು ನಿಜವಾದ ಸುವಾಸನೆಯನ್ನು ಬೀರಬೇಕಿದ್ದರೆ ಅದು ನಿಮ್ಮ ಹೃದಯದಿಂದ ಚಿಮ್ಮಬೇಕು. ಅಂದರೆ ನೀವು ಒಬ್ಬ ಮಾನವನನ್ನಲ್ಲಾ ಸಮಗ್ರ ಮಾನವಕುಲವನ್ನೇ ಸೆರೆ ಹಿಡಿಯುವಿರಿ. ಇದು ನಿಮ್ಮ ಜನ್ಮಸಿದ್ಧ ಹಕ್ಕು. ಪುರುಷನು ಮಹಿಳೆಯರಿಂದಲೇ ಹುಟ್ಟಿದ್ದಾನೆ. ಅವನು ಅವಳ ಮಾಂಸವಾಗಿ, ಹಾಗು ಆಸ್ತಿಯಾಗಿ ಇರುವುದರಿಂದ ನೀವು ನಿಮ್ಮನ್ನರಿತುಕೊಂಡು ಪುನಃ ನಿಮ್ಮ ಸಂದೇಶವನ್ನು ಬೀರಿರಿ.

(8–12–1927)

* * *

ಹುಡುಗಿಯರು ಹಾಗು ಹಿರಿಯ ಹೆಂಗಳೆಯರೂ ಕೂಡ ಬೆಳ್ಳಿ ಅಥವಾ ಬಂಗಾರದ ಸರಪಳಿ ಹಾಗು ಉಂಗುರಗಳನ್ನು ಆಭರಣಗಳೆಂದು ಭಾವಿಸುವಂತೆ ಸೆರೆಯಾಳುಗಳು ತಮ್ಮ ಸರಪಳಿಗಳನ್ನು ಆಭರಣಗಳೆಂದು ತಪ್ಪಿ ಅಪ್ಪಿರುವಾಗ ಅವರ ಆ ಬೇಡಿಗಳನ್ನು ಕತ್ತರಿಸುವುದು ತೀರಾ ಕಠಿಣವಾದದ್ದು.

(ಹ. 20–3–1937)

❍

## ವಿವಾಹ ಮತ್ತು ವಿವಾಹದ ಆದರ್ಶ

ವಿವಾಹವು ಬಾಳಿನಲ್ಲಿ ಒಂದು ನೈಸರ್ಗಿಕ ಅಂಶ. ಅದನ್ನು ಯಾವುದೇ ಅರ್ಥದಲ್ಲಿ ಕೀಳೆಂದು ಭಾವಿಸುವುದು ಶುದ್ಧ ತಪ್ಪು. ವಿವಾಹವನ್ನು ಒಂದು ಪವಿತ್ರ ಸಂಸ್ಕಾರವೆಂದು ಭಾವಿಸಿ, ಅದರ ಅನಂತರವೂ ಆತ್ಮಸಂಯಮನದ ಜೀವನವನ್ನು ನಡೆಸುವುದು ಆದರ್ಶ. ವಿವಾಹವು ಹಿಂದೂಧರ್ಮದ ನಾಲ್ಕು ಆಶ್ರಮಗಳಲ್ಲಿ ಒಂದಾಗಿದೆಯಲ್ಲದೆ ಉಳಿದ ಮೂರೂ ಆಶ್ರಮಗಳಿಗೆ ಇದೇ ಆಧಾರವಾಗಿದೆ. ಆದರೆ ದುರದೃಷ್ಟದಿಂದ ಆಧುನಿಕ ಯುಗದಲ್ಲಿ ವಿವಾಹವನ್ನು ಕೇವಲ ದೈಹಿಕ ಸಂಯೋಗವೆಂದು ಪರಿಗಣಿಸುತ್ತಾರೆ.

(ಹ. 20–3–1942)

* * *

ಹೆಂಡತಿಯು ಗಂಡನ ಗುಲಾಮಳಾಗದೆ ಅವನ ಒಡನಾಡಿಯಾಗಿರುವಳು. ಅಷ್ಟೇಕೆ, ಅವಳು ಅವನ ಅರ್ಧಾಂಗಿಯೂ, ಸಹಧರ್ಮಿಣಿಯೂ ಹಾಗೂ ಸ್ನೇಹಿತೆಯೂ ಆಗಿರುವಳು. ಅವಳು ಗಂಡನ ಅಧಿಕಾರ ಹಾಗು ಕರ್ತವ್ಯಗಳೆರಡರಲ್ಲಿಯೂ ಸಮಪಾಲಿಗಳಿರುವಳು. ಅಂತಲೇ ಗಂಡಹೆಂಡಿರ ಮಧ್ಯದಲ್ಲಿರುವ ಋಣಾನುಬಂಧವು ಹಾಗೂ ಜಗತ್ತಿನೊಡನೆ ಇರುವ ಅವರಿಬ್ಬರ ಋಣಾನುಬಂಧವು ಒಂದೇ ವಿಧ ಇದ್ದಿರುವುದಲ್ಲದೆ, ಪರಸ್ಪರರಲ್ಲಿಯ ಕೊಂಡುಕೊಳ್ಳುವ ದೃಷ್ಟಿಯೂ ಒಂದೇ ಆಗಿದೆ.

(ಯ.ಇ. 21–5–1931)

* * *

ಪ್ರಶ್ನೆ : ಹಿಂದೂಧರ್ಮದ ಮೇರೆಗೆ ಪತಿಯು ಪತ್ನಿಯೊಡನೆ ಭೂತನಂತೆ ವರ್ತಿಸಲಿ ಅಥವಾ ಕಾಮನಂತೆ ಪ್ರೀತಿಸಲಿ, ಅವಳು ಅವನಲ್ಲಿ ತಾದಾತ್ಮ್ಯಹೊಂದಿ ಪತಿಭಕ್ತಿಯಿಂದ ಕೂಡಿರಬೇಕಾದದ್ದು ಅವಳ ಅತ್ಯಂತ ಹಿರಿಯ ಗುರಿಯೆನಿಸಿದೆ. ಈ ರೀತಿ ಹೆಂಡತಿಯು ನಡೆಯಬೇಕಾದ ಧರ್ಮವಾದರೆ ಅವಳು ಗಂಡನ ವಿರೋಧವನ್ನು ನಿರ್ಲಕ್ಷಿಸಿ ರಾಷ್ಟ್ರಸೇವೆಯನ್ನು ಕೈಕೊಳ್ಳಬಹುದೇ? ಅಥವಾ ಆಕೆಯು ತನ್ನ ಪತಿಯು ಅವಕಾಶವನ್ನು ನೀಡುವಷ್ಟೇ ರಾಷ್ಟ್ರಸೇವೆಯನ್ನು ಮಾಡಬೇಕೆ?

ಗಾಂಧೀಜಿ ಈ ರೀತಿ ಇದಕ್ಕೆ ಉತ್ತರವಿತ್ತಿದ್ದಾರೆ:

ನನ್ನ ದೃಷ್ಟಿಯಲ್ಲಿ ಆದರ್ಶ ಸತಿ-ಪತಿಗಳೆಂದರೆ ಸೀತಾದೇವಿ ಶ್ರೀರಾಮಚಂದ್ರರು. ಸೀತೆ ರಾಮನ ಗುಲಾಮಳಾಗಿರಲಿಲ್ಲ. ಇಬ್ಬರೂ ಒಬ್ಬರೊಬ್ಬರ ಗುಲಾಮರಾಗಿದ್ದರು. ಸೀತೆಯ ವಿಷಯದಲ್ಲಿ ರಾಮನು ಸದಾ ವಿವೇಕಿಯಾಗಿ ವರ್ತಿಸಿದನು. ನಿಜವಾದ ಪ್ರೀತಿಯಿರುವೆಡೆಯಲ್ಲೆಲ್ಲಾ ಈ ಪ್ರಶ್ನೆಯೇ ಉದ್ಭೂತವಾಗುವುದಿಲ್ಲ. ಎಲ್ಲೆಲ್ಲಿ ಈ ನಿಜವಾದ ಪ್ರೇಮವಿರುವುದಿಲ್ಲವೋ ಅಲ್ಲಲ್ಲಿ ಸತಿ-ಪತಿಗಳಲ್ಲಿ ತಿಳುವಳಿಕೆಯ ಒಡಂಬಡಿಕೆಯೇ ಇರುವುದಿಲ್ಲ. ಆದರೆ ಇಂದು ಹಿಂದೂ ಸಂಸಾರವು ಒಂದು ಒಡೆಯಲಾರದ ಒಗಟಾಗಿದೆ. ವಿವಾಹಬದ್ಧರಾದ ಸತಿಪತಿಗಳು ಒಬ್ಬರನ್ನೊಬ್ಬರು ತಿಳಿದುಕೊಂಡಿರುವುದೇ ಇಲ್ಲ. ಸಂಪ್ರದಾಯದಿಂದ ಬಲಗೊಂಡ ಧಾರ್ಮಿಕ ಅನುಮತಿ ಹಾಗೂ ವಿವಾಹಿತರ ಸುಗಮ ಜೀವನದ ಝುರಿ ಅಸಂಖ್ಯವಾದ ಹಿಂದೂ ಸಂಸಾರಗಳಲ್ಲಿ ಶಾಂತಿಯನ್ನು ರಕ್ಷಿಸಿಕೊಂಡು ಬಂದಿದೆ. ಆದರೆ ಪತಿಯೋ ಅಥವಾ ಪತ್ನಿಯೋ ಬೇರೆದಿಶೆಯಲ್ಲಿ ವಿಚಾರಮಾಡಲು ಪ್ರಾರಂಭಿಸಿದರೆ, ಆ ವಿಚಾರ ಅವರಿಬ್ಬರ ಮಧ್ಯದಲ್ಲಿ ಅಡೆತಡೆಗಳನ್ನು ತಂದೊಡ್ಡುತ್ತದೆ. ಪತಿಗೆ ಯಾವ ಆತಂಕವಿರದಿದ್ದರೂ, ಅವನು ತನ್ನ ಸಂಗಾತಿಯ ಆಶೇಚ್ಛೆಗಳನ್ನು ತಿಳಿದುಕೊಳ್ಳಬೇಕಾದದ್ದು ತನ್ನ ಕರ್ತವ್ಯವೆಂದೇ ಭಾವಿಸುವುದಿಲ್ಲ. ಗಂಡನು ಹೆಂಡತಿಯನ್ನು ತನ್ನ ಆಸ್ತಿಯೆಂದೇ

ತಿಳಿಯುತ್ತಾನೆ. ಗಂಡನ ಈ ವಾದವನ್ನೇ ನಂಬುವ ಬಡಹೆಂಡತಿ ಅನೇಕ ಸಲ ತನ್ನನ್ನೇ ತಾನು ಹಾಳು ಮಾಡಿಕೊಳ್ಳುತ್ತಾಳೆ. ಈ ತೊಡಕನ್ನು ಬಿಡಿಸಲು ಮೀರಾಬಾಯಿ ಒಂದು ಹಾದಿಯನ್ನು ಹುಡುಕಿ ತೋರಿಸಿದ್ದಾಳೆ. ಹೆಂಡತಿಗೆ, ತಾನು ಸರಿಯಾದ ಮಾರ್ಗದಲ್ಲಿರುವೆನೆಂದೂ ಹಾಗೂ ತನ್ನ ಪ್ರತಿಭಟನೆ ಸದುದ್ದೇಶಕ್ಕಾಗಿಯೇ ಪ್ರೇರೇಪಿತವಾಗಿದೆಯೆಂದೂ ಅನಿಸಿದಾಗ, ಅದರ ಫಲಾಫಲಗಳನ್ನು ಧೈರ್ಯವಾಗಿ ಎದುರಿಸುವ ಹಕ್ಕಿದೆಯೆಂಬುದೇ ಮೀರಾಬಾಯಿ ತೋರಿಸಿದ ಹಾದಿ.

ಗಾಂಧೀಜಿ ತಾವೇ ನಡೆಸಿದ ಯುವಕ ದಂಪತಿದ್ವಯದ ವಿವಾಹ ಸಮಾರಂಭದಲ್ಲಿ ಅವರನ್ನು ಉದ್ದೇಶಿಸಿ ಆಪ್ತವಾದ ರೀತಿಯಲ್ಲಿ ಹೀಗೆ ನುಡಿದರು.

"ಸಮಾರಂಭಗಳಲ್ಲಿಯ ಕರ್ತವ್ಯಜ್ಞಾನವನ್ನು ಜಾಗೃತಗೊಳಿಸುವಷ್ಟು ಅಂಶವನ್ನುಳಿದು ಬೇರಾವುದನ್ನೂ ನಾನು ನಂಬುವುದಿಲ್ಲವೆಂದು ನೀವು ತಿಳಿದುಕೊಳ್ಳಬೇಕು. ನನ್ನನ್ನು ನಾನೇ ಕಂಡುಕೊಳ್ಳಲು ವಿಚಾರಮಾಡಲು ಪ್ರಾರಂಭಿಸಿದಾಗಿನಿಂದ ಈ ಮನೋಧರ್ಮವನ್ನು ಪಡೆದಿದ್ದೇನೆ. ನೀವು ಉಚ್ಚರಿಸಿದ ಮಂತ್ರಗಳೂ, ನೀವು ಸ್ವೀಕರಿಸಿದ ಪ್ರತಿಜ್ಞೆಗಳೂ ಸಂಸ್ಕೃತದಲ್ಲಿದ್ದು ಅವುಗಳನ್ನು ನಿಮಗೆ ಭಾಷಾಂತರಿಸಿದ್ದಾರೆ. ಸಂಸ್ಕೃತದ ಶಬ್ದದಲ್ಲಿ ಒಂದು ಶಕ್ತಿಯಿದ್ದು, ಆ ಶಕ್ತಿಯ ಪ್ರಭಾವಕ್ಕೆ ಒಳಗಾಗಿ ಯಾರೂ ಪ್ರೀತಿಸಬಹುದು. ಆದುದರಿಂದಲೇ ಸಂಸ್ಕೃತದ ಮೂಲಪಾಠವನ್ನು ಉಪಯೋಗಿಸಲಾಯಿತು."

"ಈ ಸಮಾರಂಭದಲ್ಲಿ ಪತಿಯು ತನ್ನ ಪತ್ನಿಯು ಒಳ್ಳೆಯ ಮತ್ತು ಆರೋಗ್ಯವಂತ ಪುತ್ರನ ತಾಯಿಯಾಗಲಿ" ಎಂದು ಹಾರೈಸುವುದಿದೆ. ಈ ಹಾರೈಕೆ ನನ್ನನ್ನು ತಲ್ಲಣಗೊಳಿಸಲಿಲ್ಲ. ಇದರಿಂದ ಸಂತಾನೋತ್ಪತ್ತಿ ನಿರ್ಬಂಧವೆಂದು ಅರ್ಥವಲ್ಲ, ಸಂತಾನದ ಅಪೇಕ್ಷೆಯಿದ್ದವರು ನಿಷ್ಠೆ ಬೆರೆತ ಧಾರ್ಮಿಕ ಮನಸ್ಸಿನಿಂದ ಮದುವೆ ಮಾಡಿಕೊಳ್ಳಬೇಕು

ಎಂದರ್ಥ. ಸಂತಾನದ ಅಪೇಕ್ಷೆಯೇ ಇಲ್ಲದವರು ಮದುವೆಯನ್ನೇ ಮಾಡಿಕೊಳ್ಳಬಾರದು ಲೈಂಗಿಕ ತೃಪ್ತಿಗಾಗಿ ಮದುವೆ ಮಾಡಿಕೊಂಡರೆ ಅದು ಮದುವೆಯೇ ಅಲ್ಲ. ಇದು ವ್ಯಭಿಚಾರವೆನಿಸುತ್ತದೆ; ಕಾಮವಿಕಾರವೆನಿಸುತ್ತದೆ. ಇಂದಿನ ಸಮಾರಂಭದಲ್ಲಿ, ಇಬ್ಬರಿಗೂ ಸಂತಾನಾಪೇಕ್ಷೆಯಿದ್ದರೆ ಮಾತ್ರ ಸಂಭೋಗ ಕ್ರಿಯೆಗೆ ಅನುಮತಿಯು ಕೊಡಲ್ಪಡುವುದು. ಈ ಸಮಗ್ರ ಕಲ್ಪನೆಯೇ ಪವಿತ್ರವಾದದ್ದು. ಆದುದರಿಂದ ಈ ಕ್ರಿಯೆಯು ಪ್ರಾರ್ಥನಾಪರತೆಯಿಂದ ಆಚರಿಸಲ್ಪಡಬೇಕು. ಲೈಂಗಿಕ ಉದ್ದೀಪನ ಮತ್ತು ಇಂದ್ರಿಯ ಭೋಗಗಳನ್ನು ಉಂಟು ಮಾಡುವಂಥ ಪ್ರಣಯಾರಾಧನೆ ಇದಕ್ಕೆ ಪೂರ್ವಭಾವಿಯಾಗಿ ಇರುವುದಿಲ್ಲ. ಮಗುವಿನ ಅಪೇಕ್ಷೆಯಿಲ್ಲದಿದ್ದರೆ, ಜೀವನದಲ್ಲಿ ಇಂಥ ಸಂಯೋಗ ಒಂದೇ ಬಾರಿ ಆದೀತು. ನೈತಿಕವಾಗಿಯೂ ದೈಹಿಕವಾಗಿಯೂ ಆರೋಗ್ಯವಿಲ್ಲದವರು ಸಂಭೋಗವನ್ನು ಮಾಡಲೇಬಾರದು. ಹಾಗೆ ಮಾಡಿದರೆ ಅದು ವ್ಯಭಿಚಾರ ಹಾಗು ವಿಷಯಲೋಲುಪತೆಯಾಗುತ್ತಿದೆ. ಪಶು ತೃಷೆಗಾಗಿ ಮದುವೆ ಮಾಡಿಕೊಳ್ಳಬೇಕೆಂಬ ಭಾವನೆ ನಿಮ್ಮಲ್ಲಿ ಇದ್ದುದಾದರೆ ಅದನ್ನು ನೀವು ಮರೆಯಬೇಕು. ಸಮಾರಂಭವೆಲ್ಲವೂ ಪವಿತ್ರ ಅಗ್ನಿದೇವನ ಸಾಕ್ಷಿಯಲ್ಲಿ ನಡೆದಿದೆ. ಈ ಅಗ್ನಿ ನಿಮ್ಮಲ್ಲಿರುವ ಭೋಗಲಾಲಸೆಯನ್ನು ಸುಟ್ಟು ಭಸ್ಮಮಾಡಲಿ."

"ಈಗಿನ ಕಾಲದಲ್ಲಿ ಅತಿಯಾಗಿ ಹಬ್ಬಿರುವ ಇನ್ನೊಂದು ಮೂಢನಂಬಿಕೆಯಂಥ ತಪ್ಪು ತಿಳುವಳಿಕೆಯನ್ನು ನೀವು ಬಿಡಬೇಕೆಂದು ಕೇಳಿಕೊಳ್ಳುತ್ತೇನೆ. ಸಂಯಮ, ಮತ್ತು ಭೋಗ ವಿಮುಖತೆ ತಪ್ಪೆಂದೂ, ಲೈಂಗಿಕ ತೃಷೆಯನ್ನು ಯಾವ ನಿರ್ಬಂಧವಿಲ್ಲದೆ ಪಡೆಯಬೇಕೆಂಬುದೂ, ಬಂಧನರಹಿತ ಕಾಮವೂ ತೀರಾ ಸ್ವಾಭಾವಿಕವೆಂದೂ ಹೇಳಲಾಗುತ್ತದೆ. ಯಾವ ಕಾಲದಲ್ಲಿಯೂ ಇದಕ್ಕಿಂತ ಹೆಚ್ಚು ವಿನಾಶಾತ್ಮಕ ಮೂಢನಂಬಿಕೆ ಇರಲಿಲ್ಲ. ಆದರ್ಶ ಸಾಧಿಸಲು ನೀವು ಅಶಕ್ತರಿರಬಹುದು ಅಥವಾ ನಿಮ್ಮ ಪ್ರಕೃತಿ

ದುರ್ಬಲವಿರಬಹುದು. ಆದರೆ ಆದರ್ಶವನ್ನು ಕೆಳಕ್ಕಿಳಿಸಬೇಡಿರಿ; ಅಧರ್ಮವನ್ನೇ ನಿಮ್ಮ ಧರ್ಮವನ್ನಾಗಿ ಮಾಡಬೇಡಿರಿ. ನಿಮ್ಮ ದುರ್ಬಲ ನಿಮಿಷಗಳಲ್ಲಿ ನನ್ನ ಮಾತುಗಳನ್ನು ನೆನಪಿಗೆ ತಂದುಕೊಳ್ಳಿರಿ. ಈ ಪವಿತ್ರ ಗಂಭೀರ ಸಮಯದ ನೆನಪು ನಿಮ್ಮನ್ನು ದೃಢವಾಗಿಟ್ಟು ಸಂಯಮದಲ್ಲಿಡಬಹುದು. ವಿವಾಹದ ಉದ್ದೇಶವೇ ಸಂಯಮ ಮತ್ತು ಕಾಮೇಚ್ಛೆಯನ್ನು ಪರಮೋದಾತ್ತ ಮಾಡುವುದು. ಬೇರೆ ಉದ್ದೇಶವಿದ್ದರೆ, ಅದು ಪವಿತ್ರವೆನಿಸದು; ಅವುಗಳಿಗಾಗಿಯೂ ಜೊತೆಗೆ ಸಂತಾನೋತ್ಪತ್ತಿಗಾಗಿಯೂ ಆದ ವಿವಾಹವೆನಿಸೀತು."

"ನೀವು ಸ್ನೇಹಿತರಂತೆಯೂ, ಸರಿಸಮಾನರಂತೆಯೂ ಮದುವೆಯಲ್ಲಿ ಕೂಡುತ್ತಿದ್ದೀರಿ. ಗಂಡನು 'ಸ್ವಾಮಿ' ಎಂದು ಕರೆಯಲ್ಪಟ್ಟರೆ ಹೆಂಡತಿಯು 'ಸ್ವಾಮಿನಿ'ಯೆಂದು ಕರೆಯಲ್ಪಡುತ್ತಾಳೆ. ಒಬ್ಬರಿಗೊಬ್ಬರು ಗುರುವಾಗಿ ಒಬ್ಬರ ನೆರವಿಗೊಬ್ಬರು ಸಂಗಾತಿಯಾಗಿ ಒಬ್ಬರಿಗೊಬ್ಬರು ಸಹಕರಿಸುತ್ತ ಜೀವನದ ಕಾರ್ಯಭಾರವನ್ನೂ ಮತ್ತು ಕರ್ತವ್ಯಗಳನ್ನು ಮಾಡುತ್ತೀರಿ. ಯುವಕರಾದ ನೀವು ಉತ್ತಮ ಬುದ್ಧಿಯಿಂದಲೂ, ಭಾವ ಸಂಪತ್ತಿನಿಂದಲೂ ಕೂಡಿದ್ದರೆ ಆ ಭಾವಗಳು ಹುಡುಗಿಯರ ತಲೆಗೂ ಹತ್ತುವಂತೆ ಮಾಡಿರಿ. ಅವರಿಗೆ ನಿಜವಾದ ಗುರುಗಳೂ ಮಾರ್ಗದರ್ಶಕರೂ ಆಗಿರಿ. ನೆರವನ್ನು ನೀಡಿ ಮಾರ್ಗದರ್ಶನವನ್ನು ಮಾಡಿರಿ. ಆದರೆ ಎಂದಿಗೂ ಅವರಿಗೆ ಅಡಚಣೆಯೊಡ್ಡಬೇಡಿ ಅಥವಾ ತಪ್ಪು ಮಾರ್ಗದರ್ಶನವನ್ನು ಮಾಡಬೇಡಿ. ನಿಮ್ಮಿಬ್ಬರಲ್ಲಿಯ ಭಾವ, ಮಾತು ಮತ್ತು ಕೃತಿಗಳಲ್ಲಿ ಪೂರ್ಣ ಸಾಮರಸ್ಯವಿರಲಿ. ಪರಸ್ಪರರಲ್ಲಿ ಗುಟ್ಟು ಎನ್ನುವುದಿಲ್ಲದಿರಲಿ. ನಿಮ್ಮೀರ್ವರ ಆತ್ಮಗಳೂ ಒಂದಾಗಲಿ."

"ಕಪಟ ವೃತ್ತಿಯವರಾಗಬೇಡಿರಿ. ಯಾವುದು ನಿಮಗೆ ಅಸಾಧ್ಯವೆನಿಸಬಹುದೋ ಅದನ್ನು ವೃಥಾ ಪ್ರಯತ್ನಿಸಿ ನಿಮ್ಮ ಆರೋಗ್ಯವನ್ನು ಕೆಡಿಸಿಕೊಳ್ಳಬೇಡಿರಿ. ಸಂಯಮವು ಆರೋಗ್ಯವನ್ನು ಎಂದಿಗೂ ಕೆಡಿಸದು. ಆರೋಗ್ಯವನ್ನು ಕೆಡಿಸುವುದು ಬಾಹ್ಯ ನಿಗ್ರಹವೇ

ಹೊರತು ಸಂಯಮವಲ್ಲ. ನಿಜವಾಗಿಯೂ ಆತ್ಮಸಂಯಮವನ್ನು ಪಡೆದ ವ್ಯಕ್ತಿ ಪ್ರತಿ ದಿನ ಹೆಚ್ಚು ಶಕ್ತಿಯನ್ನೂ ಹಾಗು ಹೆಚ್ಚು ಶಾಂತಿಯನ್ನು ಪಡೆಯುವನು. ಆತ್ಮಸಂಯಮದಲ್ಲಿ ವಿಚಾರಗಳ ಮೇಲಿನ ಹತೋಟಿಯೇ ಮೊದಲ ಹೆಜ್ಜೆ. ನಿಮ್ಮ ಇತಿಮಿತಿಗಳನ್ನರಿತುಕೊಂಡು, ನಿಮಗೆ ಎಷ್ಟು ಸಾಧ್ಯವೋ ಅಷ್ಟನ್ನೇ ಮಾಡಿರಿ. ಸಮಕೋನದಂತಿರುವ ಆದರ್ಶವನ್ನು ನಿಮ್ಮೆದುರು ಇರಿಸಿದ್ದೇನೆ. ಸಮಕೋನವನ್ನು ಸಾಧಿಸಲು ನಿಮ್ಮ ಸರ್ವಸಾಮರ್ಥ್ಯವನ್ನು ಉಪಯೋಗಿಸಿ ಪ್ರಯತ್ನಿಸಿರಿ. ನೀವು ಸೋತರೆ ದುಃಖಕ್ಕಾಗಲಿ ಅಥವಾ ಅವಮಾನಕ್ಕಾಗಲಿ ಕಾರಣವಿಲ್ಲ. ವಿವಾಹವು ಒಂದು ದೀಕ್ಷೆ, ಹೊಸ ಹುಟ್ಟು, ಉಪನಯನವು ಹೇಗೆ ಒಂದು ದೀಕ್ಷೆಯೋ ಹೊಸಹುಟ್ಟು ಹಾಗೆಯೇ! ಇದನ್ನು ನಿಮಗೆ ನಾನು ಸರಳವಾಗಿ ವಿವರಿಸಿದ್ದೇನೆ. ನನ್ನ ಈ ಮಾತು ನಿಮಗೆ ಭಯವನ್ನೂ ನಿರ್ಬಲತೆಯನ್ನೂ ಉಂಟುಮಾಡದಿರಲಿ, ಸದಾ, ವಿಚಾರ ಮಾತು ಕೃತಿಗಳಲ್ಲಿ ಸಾಮರಸ್ಯವನ್ನೇ ಗುರಿಯನ್ನಾಗಿ ಇಡಿರಿ; ಅಂದರೆ ಎಲ್ಲವೂ ತಾನೇ ಸರಿಹೋಗುತ್ತಿದೆ. ವಿಚಾರಕ್ಕಿಂತ ಶಕ್ತಿಯುತವಾದುದು ಯಾವುದೂ ಇಲ್ಲ. ಕೃತಿಯು ಮಾತನ್ನು, ಮಾತು ವಿಚಾರವನ್ನು ಅನುಸರಿಸುತ್ತವೆ. ಈ ವಿಶ್ವವು ಒಂದು ಮಹಾ ವಿಚಾರದ ಪರಿಣಾಮ; ವಿಚಾರವು ಸತ್ವಯುತವೂ ಶುದ್ಧವೂ ಆದಷ್ಟು ಪರಿಣಾಮವೂ ಶಕ್ತಿಯುತವೂ ಮತ್ತು ಶುದ್ಧವೂ ಆಗುತ್ತದೆ. ಆದುದರಿಂದ ಉದಾತ್ತ ಆದರ್ಶದ ರಕ್ಷಾಕವಚನವನ್ನು ತೊಟ್ಟು ನೀವಿಲ್ಲಿಂದ ತೆರಳಬೇಕೆಂದು ನನ್ನಿಚ್ಛೆ. ಇದರಿಂದ ಯಾವ ಮನಸ್ಸಿನ ಸೆಳೆತವೂ ನಿಮಗೆ ಅಪಾಯವನ್ನುಂಟುಮಾಡದು, ಯಾವ ಅಪವಿತ್ರತೆಯೂ ನಿಮ್ಮನ್ನು ಮುಟ್ಟದು."

"ನಿಮಗೆ ಹೇಳಿರುವ ವಿವಿಧ ಸಂಸ್ಕಾರಗಳನ್ನೆಲ್ಲಾ ನೆನಪಿನಲ್ಲಿಟ್ಟುಕೊಳ್ಳಿರಿ. ಸರಳವಾದ ಮಧುಪರ್ಕವಿಧಿಯನ್ನು ನೋಡಿರಿ. ಈ ವಿಶ್ವವೆಲ್ಲವೂ ಮಧುವಿನಿಂದ ತುಂಬಿದೆ. ಆದರೆ ಬೇರೆಯವರೆಲ್ಲರೂ ತಮ್ಮ ಪಾಲಿನದನ್ನು ಸುರಿದ ಮೇಲೆ ನಿಮ್ಮ ಪಾಲನ್ನು ಸವಿಯಲು

ನೀವು ಅನುವಾಗಬೇಕು. ಇದರ ಮಥಿತಾರ್ಥ ತ್ಯಾಗದಿಂದಲೇ ಭೋಗ."

'ಸಂತಾನದ ಅಪೇಕ್ಷೆಯಿಲ್ಲದಿದ್ದರೆ ಮದುವೆಯಾಗಕೂಡದೆ?' ಎಂದು ವರನೊಬ್ಬನು ಪ್ರಶ್ನಿಸಿದನು.

"ಖಂಡಿತವಾಗಿಯೂ ಮದುವೆಯಾಗಬಾರದು. ಕೇವಲ ಅಧ್ಯಾತ್ಮಪೂರಿತ ವಿವಾಹಗಳಲ್ಲಿ ನನಗೆ ನಂಬಿಕೆಯಿಲ್ಲ, ಕೆಲ ವಿಶಿಷ್ಟ ಸಂದರ್ಭಗಳಲ್ಲಿ ಪುರುಷರು ದೈಹಿಕ ಸಂಬಂಧದ ಉದ್ದೇಶವಿಲ್ಲದಲೆ ಸ್ತ್ರೀಯರ ರಕ್ಷಣೆಗಾಗಿ ಅವರನ್ನು ವಿವಾಹವಾದದ್ದುಂಟೆಂಬ ಪ್ರತೀತಿ ಇದೆ. ಆದರೆ, ಅಂಥ ಸಂದರ್ಭಗಳು ತೀರ ವಿರಳ. ಶುದ್ಧ ವೈವಾಹಿಕ ಜೀವನದ ಮೇಲೆ ನಾನು ಬರೆದಿರುವುದನ್ನೆಲ್ಲಾ ನೀವು ಓದಬೇಕು. ನಾನು ಮಹಾಭಾರತದಲ್ಲಿ ಓದಿದ ಒಂದು ಸಂಗತಿ ದಿನವೂ ನನ್ನಲ್ಲಿ ಪ್ರಭಾವ ಬೀರುತ್ತ ಹೊರಟಿದೆ. ವ್ಯಾಸರು 'ನಿಯೋಗ' ಎಂಬ ವಿಧಾನವನ್ನು ಆಚರಿಸಿದುದಾಗಿ ಅಲ್ಲಿ ಉಲ್ಲೇಖಿಸಲ್ಪಟ್ಟಿದೆ. ಅವರು ಸುಂದರಾಂಗ ಎಂಬುದಾಗಿ ವರ್ಣಿಸಲ್ಪಟ್ಟಿಲ್ಲ; ಅದಕ್ಕೆ ವ್ಯತಿರಿಕ್ತವಾಗಿ ಅವರ ರೂಪವನ್ನು ವಿಕಾರವೆಂದು ವರ್ಣಿಸಲಾಗಿದೆ. ಅವರು ಯಾವ ಬಗೆಯ ಪ್ರಣಯ ಸಂಜ್ಞೆಯನ್ನೂ ಮಾಡಲಿಲ್ಲ. ಸಂಭೋಗಕ್ಕೆ ಮೊದಲು ಅವರು ತಮ್ಮ ಶರೀರವನ್ನೆಲ್ಲಾ ತುಪ್ಪದಿಂದ ಲೇಪನಮಾಡಿಕೊಂಡರು. ಅವರು ಕಾಮೇಚ್ಛೆ ಇಲ್ಲದಲೆ ಸಂತಾನ ಪಡೆಯುವ ಇಚ್ಛೆಯಿಂದ ಕ್ರಿಯೆಯನ್ನು ನಡೆಸಿದರು. ಸಂತಾನ ಹೊಂದಬೇಕೆಂಬ ಆಶೆ ಸ್ವಾಭಾವಿಕವಾದುದು. ಅದು ತೃಪ್ತಿಯಾದ ಮೇಲೆ ಸಂಭೋಗವನ್ನೇ ಮಾಡಬಾರದು.

"ಮನುವು, ಮೊದಲನೆಯ ಮಗುವನ್ನು ಧರ್ಮಜ–ಕರ್ತವ್ಯ ನಿಷ್ಠೆಯಿಂದ ಜನಿಸಿದವನು ಎಂದೂ, ಮೊದಲನೆಯದರ ತರುವಾಯ ಜನಿಸಿದ ಮಕ್ಕಳನ್ನು ಕಾಮಜ–ಕಾಮೇಚ್ಛೆಯಿಂದ ಜನಿಸಿದವರು ಎಂದೂ ವರ್ಣಿಸಿದ್ದಾನೆ. ಈ ಮಾತು ಲೈಂಗಿಕ ಸಂಬಂಧದ

ಧರ್ಮವನ್ನು ಸಂಗ್ರಹವಾಗಿ ತಿಳಿಸುತ್ತಿದೆ. ದೇವರು ಧರ್ಮವಲ್ಲದೆ ಮತ್ತೇನು? ದೇವರಿಗೆ ವಿಧೇಯತೆಯೆಂದರೆ ಧರ್ಮಾನುಚರಣೆ. ನಾನು ಯಾವ ರೀತಿಯಲ್ಲಿಯೂ ಧರ್ಮವನ್ನು ಉಲ್ಲಂಘಿಸಿ ನಡೆಯುವುದಿಲ್ಲ ಎಂದು ನೀವು ಮೂರು ಬಾರಿ ಪುನಶ್ಚರಣೆ ಮಾಡಿದುದನ್ನು ಜ್ಞಾಪಕದಲ್ಲಿಡಿರಿ. ಹೀಗೆ ಧರ್ಮಮಾರ್ಗದಲ್ಲಿ ನಡೆಯಲು ಕೆಲವೇ ಮಂದಿ ಸ್ತ್ರೀಪುರುಷರು ಸಿದ್ಧರಾದರೆ ಆಗ, ಧೀರರೂ ಸತ್ಯಪ್ರಿಯರೂ ಆದ ಜನಾಂಗವನ್ನು ನಾವು ಪಡೆಯುತ್ತೇವೆ."

"ಬಾಳನ್ನು ಕಾಮುಕ ದೃಷ್ಟಿಯಿಂದ ನಾನು ಎಂದು ನೋಡುವುದನ್ನು ಬಿಟ್ಟೆನೋ ಅಂದಿನಿಂದಲೇ ವೈವಾಹಿಕ ಜೀವನದ ಸುಖವನ್ನು ನಿಜವಾಗಿಯೂ ನಾನು ಅನುಭವಿಸಲಾರಂಭಿಸಿದೆನೆಂಬುದನ್ನು ನೆನಪಿನಲ್ಲಿಡಿರಿ. ತಾರುಣ್ಯದ ಭರದಲ್ಲಿದ್ದು, ಆರೋಗ್ಯವಂತನಾಗಿ, ಬಾಳಿನ ಸುಖವನ್ನು ಅನುಭವಿಸಲು ಅರ್ಹನೆಂದು ಪರಿಗಣಿಸಲ್ಪಟ್ಟ ಕಾಲದಲ್ಲಿಯೇ ಭೋಗವನ್ನು ತ್ಯಾಗಮಾಡುವ ವ್ರತಕ್ಕಂಟಿಕೊಂಡೆ. ನಾವೆಲ್ಲರೂ ಜನ್ಮ ತಾಳಿರುವಂತೆಯೇ, ನಾನೂ ಒಂದು ಪವಿತ್ರ ಧ್ಯೇಯಸಾಧನೆಗಾಗಿಯೇ ಜನ್ಮವನ್ನು ತಾಳಿರುವನೆಂದು ಕ್ಷಣಾರ್ಧದಲ್ಲಿ ಹೊಳೆಯಿತು. ವಿವಾಹದ ಕಾಲಕ್ಕೆ ನನಗಿದು ತಿಳಿದಿರಲಿಲ್ಲ. ನನಗೆ ಜ್ಞಾನೋದಯವಾದೊಡನೆ ನಾನು ಯಾವ ಪವಿತ್ರ ಧ್ಯೇಯಕ್ಕಾಗಿ ಜನ್ಮಿಸಿದೆನೋ ಅದಕ್ಕೆ ವಿವಾಹವು ಸಾಧನವಾಗುವಂತೆ ನೋಡಿಕೊಳ್ಳಬೇಕೆಂದು ನಾನು ವಿಚಾರಿಸಿದೆ. ಆಗಲೇ ನಾನು ಧರ್ಮದ ನಿಜಸ್ವರೂಪವನ್ನು ಅರಿತುಕೊಂಡೆ. ವ್ರತಾಚರಣೆಯ ನಿಯಮವನ್ನು ತೆಗೆದುಕೊಂಡಾಗಲೇ ನಮ್ಮ ದಾಂಪತ್ಯಜೀವನದಲ್ಲಿಯ ನಿಜವಾದ ಸುಖವನ್ನು ನಾವು ಕಂಡುಕೊಂಡೆವು. ಬಾ, ದುರ್ಬಲಳಂತೆ ಕಂಡರೂ ಸದೃಢಳಾಗಿದ್ದಾಳೆ. ಮುಂಜಾವಿನಿಂದ ಸಂಜೆಯವರೆಗೆ ದುಡಿಯುತ್ತಾಳೆ, ಆಕೆ; ನಾನು ನನ್ನ ವಿಷಯಭೋಗವನ್ನೇ ಮುಂದುವರಿಸಿದ್ದರೆ ಈ ರೀತಿ ಮಾಡಲು ಸಮರ್ಥಳಾಗುತ್ತಿರಲಿಲ್ಲ."

"ಆದರೂ, ಅನೇಕ ವರುಷ ನಾನು ದಾಂಪತ್ಯಜೀವನವನ್ನು ನಡೆಸಿದ ಮೇಲೆ ಜಾಗೃತನಾದುದರಿಂದ ಬಹಳ ತಡವಾಗಿಯೇ 'ನಾನು ಜಾಗೃತಿಹೊಂದಿದೆ'ನೆಂದು ಹೇಳಬೇಕು. ಸಕಾಲದಲ್ಲಿ ಜಾಗೃತಿ ಹೊಂದುವಷ್ಟು ಅದೃಷ್ಟವು ನಿಮಗಿದೆ. ನಾನು ಮದುವೆ ಮಾಡಿಕೊಂಡ ಸಂದರ್ಭ ಎಷ್ಟು ಅನಾನುಕೂಲದ್ದಾಗಬೇಕಿತ್ತೋ ಅಷ್ಟು ಅನಾನುಕೂಲದ್ದಾಯಿತು. ಆದರೆ ನನ್ನಲ್ಲಿದ್ದ ಒಂದು ಅಂಶ ಮಾತ್ರ ನನ್ನನ್ನು ಪಾರುಮಾಡಿತು. ಅದೇ ಸತ್ಯದ ರಕ್ಷಾಕವಚ. ಅದು ನನ್ನನ್ನು ರಕ್ಷಿಸಿ ಕಾಪಾಡಿತು. ಸತ್ಯವು ನನ್ನ ಬಾಳಿನ ಅಸ್ತಿಭಾರವಾಗಿದೆ. ಈ ಸತ್ಯದಿಂದ ಬ್ರಹ್ಮಚರ್ಯವೂ ಅಹಿಂಸೆಯೂ ಕ್ರಮೇಣ ಹುಟ್ಟಿದವು. ಆದುದರಿಂದ ನೀವೇನನ್ನು ಮಾಡಿದರೂ, ನಿಮಗೂ ಮತ್ತು ಲೋಕಕ್ಕೂ ಪ್ರಾಮಾಣಿಕರಂತೆ ವರ್ತಿಸಿರಿ. ನಿಮ್ಮ ವಿಚಾರಗಳನ್ನು ಮುಚ್ಚಿಟ್ಟುಕೊಳ್ಳಬೇಡಿರಿ. ಅವುಗಳನ್ನು ಹೊರಗೆಡುವುದು ಅಪಮಾನಕರವೆನಿಸಿದರೆ, ಅವುಗಳ ಬಗೆಗೆ ಚಿಂತಿಸುವುದು ಇನ್ನೂ ಹೆಚ್ಚು ಅಪಮಾನಕರ."

(ಹ. 15–3–1942)

* * *

ಕಾಮಾಸಕ್ತಿಯು ಸ್ತ್ರೀಪುರುಷರಿಬ್ಬರಲ್ಲಿಯೂ ಅಷ್ಟೇ ಇರುತ್ತದೆ. ಇಂಥವರು ಮನಸ್ಸು ಸದಾ ವಿಲಾಸವಸ್ತುವನ್ನರಸಿಕೊಂಡೇ ಹೋಗುತ್ತಿರುತ್ತದೆ. ಆದರೆ ನಾವು ಕೇವಲ ಇಂಥ ವಿಲಾಸವನ್ನು ಕೊಡಲಿಕ್ಕಾಗಲಿ ಅಥವಾ ತೆಗೆದುಕೊಳ್ಳಕ್ಕಾಗಲಿ ಹುಟ್ಟದೆ, ಆತ್ಮಸಿದ್ಧಿಗಾಗಿ ಹುಟ್ಟಿದ್ದೇವೆ.

ಶಿವಪಾರ್ವತಿಯರ ವಿವಾಹವು ಆದರ್ಶ ವಿವಾಹವೆಂದು ಪರಿಗಣಿಸಲ್ಪಟ್ಟಿದೆ. ಯಾವಳಾದರೂ ಪಾರ್ವತಿಯಂತೆ ಮದುವೆಯಾಗಬಯಸಿದರೆ, ಅವಳು ಶಿವನಂತಹ ನಿರ್ವಿಕಾರ ವ್ಯಕ್ತಿಯನ್ನು ಚಿಂತಿಸಬೇಕು. ಅಂಥ ಪತಿಯನ್ನು ಪಡೆಯುವುದು

ಪಾರ್ವತಿಯರ ಅದೃಷ್ಟದಲ್ಲಿ ಅಷ್ಟೇ ಬರೆದಿರಲಿಲ್ಲ. ಪ್ರತಿ ಒಬ್ಬ ಮಹಿಳೆಯೂ ಅಂಥ ಅದೃಷ್ಟವನ್ನು ತನ್ನ ಹಸ್ತದಲ್ಲಿ ಹಿಡಿದಿರುತ್ತಾಳೆ.

ಪತಿಯನ್ನು ಶೋಧಿಸುವಲ್ಲಿ, ಅವನು ಹಾಕಿಕೊಂಡ ಬಟ್ಟೆಗಳನ್ನಾಗಲಿ ಅಥವಾ ಸುತ್ತಿಕೊಂಡ ರುಮಾಲವನ್ನಾಗಲಿ ನಾವು ಪರಿಗಣಿಸಬಾರದು. ನಾವು ಅವನು ಎಷ್ಟು ಶಿಕ್ಷಣವನ್ನು ಪಡೆದಿದ್ದಾನೆ? ಮತ್ತು ಅವನ ಚಾರಿತ್ರ್ಯ ಎಷ್ಟು ಒಳ್ಳೆಯದಾಗಿದೆ? ಎಂಬುದನ್ನು ನೋಡಬೇಕು. ನೀವು ಮದುವೆಯಾಗಲು ನಿರ್ಧರಿಸಿದರೆ, ಯಾರು ಸಚ್ಚರಿತರಿರುವರೋ ಹಾಗು ಯಾರ ಮನಸ್ಸು ನಿಮ್ಮ ಮನಸ್ಸಿನೊಂದಿಗೆ ಸರಿಹೋಗುವುದೋ ಅಂಥವರನ್ನೇ ಮದುವೆಯಾಗಬೇಕು. ನೀವು ಇಂಥ ಪುರುಷನನ್ನು ಪಡೆದರೆ ಸರಿಹೋಯಿತು. ಇಲ್ಲದಿದ್ದರೆ ಅವಿವಾಹಿತರಾಗಿಯೇ ಉಳಿಯಬೇಕು. ಸಿಕ್ಕವರನ್ನು ಮದುವೆಯಾಗುವ ವಿಚಾರವನ್ನು ಬಿಟ್ಟುಬಿಡಬೇಕು. ಪಾರ್ವತಿಯು ಶಿವನಂಥ ನಿರ್ವಿಕಾರ ವ್ಯಕ್ತಿಯು ದೊರೆತರೆ ಮಾತ್ರ ತಾನು ಮದುವೆಯಾಗುವುದಾಗಿಯೂ ಇಲ್ಲದಿದ್ದರೆ ಹಾಗೆಯೇ ಇರುವುದಾಗಿಯೂ ನಿರ್ಧರಿಸಿದ್ದಳು. ಪ್ರತಿ ಒಬ್ಬ ಹುಡುಗಿಯು ಪಾರ್ವತಿಯಂಥ ಆದರ್ಶವನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು.

(ಮಣಿಬೆಹನಳ ಪ್ರಾರ್ಥನಾ ಟಿಪ್ಪಣಿಗಳಿಂದ)

ಕಾಮಾಂಧತೆಗಾಗಿ ಜೀವನವನ್ನು ನಡೆಸದೆ ಹಿತವಾಗಿ ನಡೆಸುವ ವೈವಾಹಿಕ ಜೀವನವು ಅನೇಕ ವಿಧಗಳಲ್ಲಿ ಬ್ರಹ್ಮಚರ್ಯ ಜೀವನಕ್ಕಿಂತಲೂ ಕಠಿಣತಮವಾದದ್ದು.

(ಹ. 15–3–1942)

* * *

ಒಬ್ಬ ಗೆಳೆಯ ಹೀಗೆ ಬರೆಯುತ್ತಾನೆ:

"ವಿವಾಹಕ್ಕೆ ಸಂಬಂಧಿಸಿದ ವಿಧಿನಿಷೇಧಗಳು ಬಹುಶಃ ಸತ್‌ಸಂತಾನದ ದೃಷ್ಟಿಯಿಂದ ಪ್ರಸಾರಕ್ಕೆ ಬಂದಿರಬೇಕೆಂದು ನನ್ನ

ಅನುಭವಜನ್ಯ ಸ್ವಾಭಾವಿಕ ಬುದ್ಧಿಗೆ ಗೋಚರವಾಗುತ್ತದೆ. ಸ್ವಗೋತ್ರಗಳವರ ಸಂಯೋಗಕ್ಕಿಂತಲೂ ಭಿನ್ನ ಗೋತ್ರಗಳವರ ಸಂಯೋಗದಿಂದ ಸತ್-ಸಂತಾನಫಲವು ದೊರಕುವುದೆಂದು ಸಂತಾನಶಾಸ್ತ್ರದ ಒಂದು ಪ್ರಸಿದ್ಧ ನಿಯಮವಿದೆ. ನೀವು ಹೇಳುವಂತೆ ಸಂತಾನ ಉತ್ಪತ್ತಿಯೇ ವಿವಾಹದ ನ್ಯಾಯಬದ್ಧ ಗುರಿಯಾದರೆ, ಸತಿಪತಿಯರನ್ನು ಆರಿಸಿಕೊಳ್ಳುವುದು ಸಂಪೂರ್ಣವಾಗಿ ಸತ್-ಸಂತಾನದ ಪ್ರಶ್ನೆಯೇ ಆದೀತು. ಉಳಿದೆಲ್ಲ ಭಾವನೆಗಳೂ ಅಷ್ಟು ಮುಖ್ಯವಲ್ಲೆಂದು ವರ್ಣಿಸಲು ಬರಬಹುದೇ? ಹಾಗಿಲ್ಲದಿದ್ದರೆ ಅವುಗಳ ತಾರತಮ್ಯವು ಹೇಗಿರಬೇಕು? ನಾನು ಅವುಗಳನ್ನು ಕೆಳಗೆ ಬರೆದಂತೆ ನಿರೂಪಿಸುವೆ:

(1) ಪರಸ್ಪರರ ಆಕರ್ಷಣೆ ಅಥವಾ ಪ್ರೀತಿ

(2) ಸುಂದರ ಸಂತಾನೋತ್ಪತ್ತಿಯ ಸಬಲತೆ

(3) ಎರಡೂ ಮನೆತನದವರ ಒಪ್ಪಿಗೆ ಹಾಗು ಅನುಮತಿ; ತಮ್ಮ ಸಮಾಜ ವರ್ಗದ ಹಿತಾಕಾಂಕ್ಷೆ.

(4) ಆಧ್ಯಾತ್ಮಿಕ ಅಭಿವೃದ್ಧಿ. ಇವುಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು?

ಹಿಂದೂ ಶಾಸ್ತ್ರಗಳು ಸಂತಾನೋತ್ಪನ್ನವನ್ನೇ ವಿವಾಹದ ಏಕೈಕ ಗುರಿಯೆಂದು ಸ್ಪಷ್ಟವಾಗಿ ಹೇಳಿವೆ. ವಿವಾಹಕಾಲದಲ್ಲಿ ಹಿರಿಯರು ಭಾವೀ ಗೃಹಿಣಿಯರಿಗೆ 'ನಿನಗೆ ಎಂಟು ಮಕ್ಕಳಾಗಲಿ' ಎಂದು ಆಶೀರ್ವದಿಸುವುದೇ ಇದನ್ನು ಸಮರ್ಥಿಸುತ್ತದೆ. ಗಂಡಹೆಂಡಿರ ಸಹಜೀವನ ಸಂತಾನೋತ್ಪತ್ತಿಗಾಗಿ ಇದೆಯೇ ವಿನಾ ಕಾಮೋಪಭೋಗಕ್ಕಲ್ಲವೆಂಬ ನಿಮ್ಮ ವಾದವನ್ನೇ ಇದು ಬಲಪಡಿಸುತ್ತದೆ"

ವಿವಾಹಕ್ಕೆ ಸಂಬಂಧಿಸಿದ ನಿಷೇಧಗಳಿಗೆ ನಿಶ್ಚಿತ ಶಾಸ್ತ್ರೀಯ ಆಧಾರ ಎಲ್ಲಿದೆಯೋ ನನಗೆ ತಿಳಿಯದು. ಆದರೆ, ಸದ್ಗುಣ ಮತ್ತು ಆತ್ಮನಿಗ್ರಹಗಳ ಆಚರಣೆಗೆ ಪೂರಕವಾಗುವ ಒಂದು ಸಾಮಾಜಿಕ ರೂಢಿ ಅಥವಾ

ಸಂಪ್ರದಾಯಕ್ಕೆ ನೈತಿಕ ಧರ್ಮದ ಪವಿತ್ರತೆ ಇದ್ದಿರಬೇಕೆಂದು ನನಗೆ ಸ್ಪಷ್ಟವಾಗಿ ಕಂಡುಬರುತ್ತದೆ. ಸತ್ ಸಂತಾನದ ಉದ್ದೇಶವೇ ಸಹೋದರ ಸಹೋದರಿಯರ ವಿವಾಹ ನಿಷೇಧದ ಮೂಲಕಾರಣವಾದರೆ, ಈ ನಿಷೇಧವು ಸೋದರ ಸೋದರಿಯರ ಬಾಂಧವ್ಯವಿದ್ದ ವಿವಾಹಗಳಿಗೂ ಅನ್ವಯಿಸಲೇಬೇಕು. ಆದುದರಿಂದ ಆಯಾ ಸಮಾಜದಲ್ಲಿ ಮದುವೆಗಳ ಬಗ್ಗೆ ಬಳಕೆಯಲ್ಲಿರುವ ಇಂಥ ವಿಧಿ ನಿಷೇಧಗಳನ್ನು ಗೌರವಿಸುವುದೇ ಸುರಕ್ಷಿತವಾದ ದಾರಿ. ನನ್ನ ಗೆಳೆಯರು ಆದರ್ಶವಿವಾಹದ ಬಗ್ಗೆ ಮೇಲೆ ಹೇಳಿರುವ ಅಂಶಗಳನ್ನು ನಾನು ಸಾಮಾನ್ಯವಾಗಿ ಸ್ವೀಕರಿಸುತ್ತೇನೆ. ಆದರೆ, ನಾನು ಅವುಗಳ ಸ್ಥಾನಪ್ರಧಾನ್ಯತೆಯನ್ನು ಬದಲಿಸಿ, ಕಾಮಪ್ರೇರಿತ ಪ್ರೇಮವನ್ನು ಕೊನೆಯಲ್ಲಿರಿಸುತ್ತೇನೆ. ಅದಕ್ಕೆ ಪ್ರಥಮ ಸ್ಥಾನವನ್ನು ಕೊಟ್ಟಿರುವುದರಿಂದ ಇತರ ಅಂಶಗಳು ಅದರಿಂದ ಬಹಳಮಟ್ಟಿಗೆ ಮರೆಯಾದಂತೆ ಅನಿಸುತ್ತವೆಯಲ್ಲದೆ, ಹೆಚ್ಚು ಕಡಿಮೆ ನಿರರ್ಥಕವೆನಿಸಬಹುದು. ಆದುದರಿಂದ ವಿವಾಹದಲ್ಲಿ ಆಧ್ಯಾತ್ಮಿಕ ಬೆಳವಣಿಗೆಗೆ ಮೊದಲ ಸ್ಥಾನವನ್ನು ಕೊಡಲೇಬೇಕು. ನಂತರ ಪರಸ್ಪರರ ಪ್ರೇಮಾಕರ್ಷಣೆ ಅಥವಾ ಪ್ರೀತಿ ಇರಬೇಕು. ಇದರ ಅರ್ಥ, ಇತರ ಅಂಶಗಳು ಪರಿಗಣಿಸಲ್ಪಡದಾಗ ಕಾಮಪ್ರಧಾನ ಪ್ರೇಮ ಒಂದನ್ನೇ ವಿವಾಹಕ್ಕೆ ಸಮ್ಮತವೆಂಬ ಕಾರಣವನ್ನು ಪರಿಗಣಿಸಲ್ಪಡಬಾರದು. ಇದೇ ರೀತಿ ಇತರ ಎಲ್ಲ ಅಂಶಗಳೂ ಪಾಲಿಸಲ್ಪಟ್ಟು, ಪ್ರೇಮ ಶೂನ್ಯವಾದ ವಿವಾಹವಿದ್ದರೆ ಅದನ್ನು ವರ್ಜಿಸಬೇಕು. ಸತ್‌ಸಂತಾನೋತ್ಪತ್ತಿ ಸಾಮರ್ಥ್ಯದ ಅಂಶವನ್ನು ನಾನು ಬಿಟ್ಟುಬಿಡುತ್ತೇನೆ. ಏಕೆಂದರೆ ಮದುವೆಯ ಮುಖ್ಯ ಉದ್ದೇಶ ಸಂತಾನೋತ್ಪತ್ತಿ ಆಗಿರುವುದರಿಂದ ಅದರ ಸಾಮರ್ಥ್ಯವನ್ನು ಒಂದು ಅಂಶವಾಗಿ ಪರಿಗಣಿಸಬಾರದು. ವಿವಾಹಕ್ಕೆ ಅದು ಅನಿವಾರ್ಯವಾದುದಲ್ಲದೆ ಅತ್ಯಾವಶ್ಯಕವಾಗಿದೆ.

ನಾವು ಮದುವೆಯನ್ನು ಒಂದು ಪವಿತ್ರ ಸಂಸ್ಕಾರವೆಂದು ಪರಿಗಣಿಸಿದರೆ, ಅದರಲ್ಲಿ ಒಂದೇ ಸಂತಾನಕ್ಕೆ ಅವಕಾಶವಿದೆ.

ಆದುದರಿಂದಲೇ ನಮ್ಮ ಶಾಸ್ತ್ರಗಳಲ್ಲಿ ಪ್ರಥಮ ಸಂತಾನಕ್ಕೆ 'ಧರ್ಮಜ' ಎಂಬುದಾಗಿಯೂ, ಮುಂದಿನ ಮಕ್ಕಳಿಗೆ 'ಕಾಮಜ' ಎಂಬುದಾಗಿಯೂ ಹೇಳಿದ್ದಾರೆ.

ಮಗುವಿನಾಸೆಯಿಂದ ಲೈಂಗಿಕ ಕ್ರಿಯೆಯನ್ನು ಕೈಕೊಂಡರೆ ಅದೆಂದೂ ಬ್ರಹ್ಮಚರ್ಯದ ಪರಮಾದರ್ಶಕ್ಕೆ ಅಸಮಂಜಸ ಎನಿಸುವುದಿಲ್ಲ. ಕೇವಲ ಇಂದ್ರಿಯ ಸುಖ ತೃಪ್ತಿಗಾಗಿ ಲೈಂಗಿಕ ಕ್ರಿಯೆ ಮಾಡುವುದು ಪಾಶವೀ ವೃತ್ತಿಗಿಳಿದಂತೆ. ಆದುದರಿಂದ ಪಾಶವೀ ವೃತ್ತಿಯಿಂದ ಮೇಲೇರುವ ಮಾನವನ ಪ್ರಯತ್ನ ಸಾಗಲೇಬೇಕು. ಇದರಲ್ಲಿ ಉಂಟಾಗುವ ವಿಫಲತೆಯನ್ನು ಪಾಪವೆಂದಾಗಲಿ, ಅವಮರ್ಯಾದೆಯಂದಾಗಲಿ ಎಂದೂ ತಿಳಿಯಬಾರದು. ಜಗತ್ತಿನಲ್ಲಿ ಲಕ್ಷಾಂತರ ಜನರು ನಾಲಿಗೆಯ ತೃಪ್ತಿಗಾಗಿ ತಿನ್ನುತ್ತಾರೆ. ಹಾಗೆಯೇ, ಲಕ್ಷಾಂತರ ಸತಿಪತಿಯರು ಇಂದ್ರಿಯ ಭೋಗಕ್ಕಾಗಿಯೇ ಲೈಂಗಿಕ ಕ್ರಿಯೆಯಲ್ಲಿ ಮಿತಿಮೀರಿ ತೊಡಗುತ್ತಾರೆ. ಹೀಗೆ ಮಾಡುವುದರಿಂದ ನಿಸರ್ಗ ನಿಯಮಗಳನ್ನು ಮೀರಿದುದರ ಪರಿಣಾಮವಾಗಿ ಉದ್ಭೂತವಾಗುವ ಅಸಂಖ್ಯ ರೋಗಗಳ ರೂಪದಲ್ಲಿ ಕಠೋರ ದಂಡವನ್ನು ತೆತ್ತುವರು. ಕೇವಲ ಬ್ರಹ್ಮಚರ್ಯದ ಆದರ್ಶವು ಅಥವಾ ವೈವಾಹಿಕ ಜೀವನದ ಬ್ರಹ್ಮಚರ್ಯವು ಆಧ್ಯಾತ್ಮಿಕ ಅಥವಾ ಪಾರಮಾರ್ಥಿಕ ಜೀವನವನ್ನಾಗಿ ಬಯಸುವವರಿಗೆ ಅನ್ವಯಿಸುತ್ತದೆ; ಅಂಥ ಜೀವನಕ್ಕೆ ಅದು ಅನಿವಾರ್ಯ.

(ಹ. 5-3-1937)

* * *

"ನಾನು ಮದುವೆಯಾಗಿದ್ದೇನೆ, ನನ್ನ ಹೆಂಡತಿ ಒಳ್ಳೆಯವಳಿರುವಳು. ಈ ಕಾಲ ನಾವು ಶಾಂತಿಯಿಂದಲೇ ಸಂಸಾರವನ್ನು ಸಾಗಿಸಿದ್ದೇವೆ. ಆದರೆ ದುರದೃಷ್ಟದಿಂದ ಇತ್ತೀಚೆಗೆ ನನ್ನ ಹೆಂಡತಿ ಯಾವಳನ್ನೋ ಭೆಟ್ಟಿಯಾಗಿ ತನ್ನ ಗುರುವೆಂದು ಸ್ವೀಕಾರಮಾಡಿದ್ದಾಳೆ. ಆಗಲೇ

ಅವಳಿಂದ ಗುರುಮಂತ್ರದ ಉಪದೇಶವನ್ನೂ ಪಡೆದಿದ್ದಾಳೆ. ಹೀಗಾಗಿ ನನ್ನ ಹೆಂಡತಿಯ ಜೀವನ ನನಗೆ ಮುಚ್ಚಿಟ್ಟ ಪುಸ್ತಕವಾಗಿ ಪರಿಣಮಿಸಿದೆ. ಇದರಿಂದ ನಮ್ಮಿಬ್ಬರ ಮಧ್ಯದ ಪ್ರೀತಿಯೇ ಇಲ್ಲದಂತಾಗಿದೆ. ಇದಕ್ಕೆ ನಾನೇನು ಮಾಡಬೇಕೆಂಬುದೇ ನನಗೆ ತಿಳಿಯದಾಗಿದೆ. ತುಳಸೀದಾಸರು ರೂಪಿಸಿರುವ ರಾಮನೇ ನನ್ನ ಆದರ್ಶ ನಾಯಕನಾಗಿದ್ದಾನೆ. ಅದಕ್ಕೆ ನಾನು ರಾಮನಂತೆ, ಅವಳನ್ನು ತ್ಯಜಿಸಿ ಅವಳ ಸಂಬಂಧವನ್ನೆಲ್ಲಾ ಕಡಿದುಹಾಕಿ ಬಿಡಲೇ?" ಎಂದು ಗಾಂಧೀಜಿಗೆ ಒಬ್ಬರು ಕೇಳಿದರು.

"ವಿವೇಚನೆ ಇಲ್ಲದಲೇ ನಾವು ದೊಡ್ಡವರನ್ನು ಅನುಕರಣೆ ಮಾಡಬಾರದೆಂದು ತುಳಸೀದಾಸರೇ ಹೇಳಿದ್ದಾರೆ. ಶ್ರೀರಾಮರಂಥವರು ಕಂಟಕವನ್ನು ಪರಿಹರಿಸಿದ ರೀತಿಯಲ್ಲಿಯೇ ನಾವೂ ಮಾಡಬಾರದು. ರಾಮನು ಸೀತೆಗಾಗಿ ತೋರಿಸಿದ ಪ್ರೀತಿಯನ್ನು ಕುರಿತು ನೆನೆಯಿರಿ. ಬಂಗಾರದ ಜಿಂಕೆ ಬರುವ ಮೊದಲೇ ನಿಜವಾದ ಸೀತೆ ರಾಮನ ಆಜ್ಞಾನುಸಾರವಾಗಿ ಮೋಡದ ಹಿಂದೆ ಮರೆಯಾಗಿದ್ದರಿಂದ ಅಲ್ಲಿ ಕೇವಲ ಸೀತೆಯ ನೆರಳಷ್ಟೇ ಇತ್ತೆಂದು ತುಳಸೀದಾಸರೇ ಹೇಳಿದ್ದಾರೆ. ಈ ರಹಸ್ಯ ಲಕ್ಷ್ಮಣನಿಗೂ ಗೊತ್ತಿರಲಿಲ್ಲವಂತೆ. ಕವಿ ಮುಂದುವರಿದು ರಾಮನ ಈ ಉದ್ದೇಶದಲ್ಲಿ ದಿವ್ಯತೆ ಅಡಗಿತ್ತೆಂದು ಹೇಳುತ್ತಾನೆ. ಬಂಗಾರದ ಜಿಂಕೆ ಬಂದ ಮೇಲೆ, ರಾವಣನು ಸೀತೆಯ ಈ ನೆರಳಿನ ಜೊತೆ ತನ್ನಾಟವನ್ನಾಡಿದನಂತೆ. ಆದಾಗ್ಯೂ ಸೀತೆ ರಾಮನ ಮೇಲೆ ಎಂದೂ ಕೋಪಗೊಳ್ಳಲೇ ಇಲ್ಲ. ಇಂಥ ತತ್ವಗಳ ಕೊರತೆ ಎಲ್ಲ ಸಂಸಾರಗಳಲ್ಲಿಯೂ ಇರುವಂತೆ ನಿಮ್ಮಲ್ಲಿಯೂ ಇರಲು ಸಾಕು. ಅವಳ ನಡತೆಯ ವಿರುದ್ಧ ಆರೋಪಿಸುವಷ್ಟು ಕಾಲ ಬರುವತನಕ, ನಿಮ್ಮ ಹೆಂಡತಿಗೆ ಯಾವ ಪ್ರತಿಬಂಧವನ್ನೂ ಮಾಡದೆ ನೀವು ಸಹಿಸಿಕೊಂಡು ಇರಬೇಕೆಂದು ನಾನು ಉಪದೇಶಿಸುತ್ತೇನೆ. ನೀವು ಗುರುವನ್ನು ಸ್ವೀಕಾರ ಮಾಡಿ ಗುರುಮಂತ್ರವನ್ನು ತೆಗೆದುಕೊಂಡಿದ್ದರೆ, ನೀವು ನಿಮ್ಮ ಹೆಂಡತಿಗೆ ನಿಮ್ಮ ರಹಸ್ಯವನ್ನು ಹೇಳಲು ಸಿದ್ಧರಾಗುತ್ತಿರಲಿಲ್ಲವಷ್ಟೇ ಅಲ್ಲ, ಅವಳ ಮೇಲೆ ಕೋಪವನ್ನೂ

ಮಾಡುತ್ತಿದ್ದಿರೆಂದು ನನಗೆ ಖಂಡಿತ ಗೊತ್ತಿದೆ. ಗಂಡಹೆಂಡಿರ ನಡುವೆ ಯಾವ ರಹಸ್ಯವೂ ಇರಬಾರದೆಂಬುದನ್ನು ನಾನು ಒಪ್ಪುತ್ತೇನೆ. ನನಗೆ ಮದುವೆಯ ಬಂಧನದ ಬಗ್ಗೆ ತುಂಬಾ ಗೌರವವಿದೆ. ಗಂಡ ಹೆಂಡಿರು ಒಬ್ಬರೊಬ್ಬರಲ್ಲಿ ಲೀನವಾಗಬೇಕೆಂಬುದನ್ನು ನಾನು ಒಪ್ಪುತ್ತೇನೆ. ಅವರು ಇಬ್ಬರಲ್ಲಿಯ ಒಬ್ಬರಾಗಿದ್ದಾರೆ. ಅಥವಾ ಒಬ್ಬರಲ್ಲಿಯ ಇಬ್ಬರಾಗಿದ್ದಾರೆ. ಆದರೆ ಈ ವಿಷಯಗಳನ್ನು ಯಾಂತ್ರಿಕವಾಗಿ ನಿಯಂತ್ರಿಸಲಿಕ್ಕೆಬಾರದು. ಎಲ್ಲ ವಿಷಯಗಳನ್ನೂ ತೂಗಿ ನೋಡಿದಾಗ, ನೀವು ಉದಾರಮನಸ್ಸಿನ ಗಂಡನಿರುವುದರಿಂದ, ನಿಮ್ಮ ಹೆಂಡತಿ ತನ್ನ ರಹಸ್ಯದಲ್ಲಿ ನಿಮ್ಮನ್ನು ಪಾಲುಗಾರನನ್ನಾಗಿ ಮಾಡಿಕೊಳ್ಳಲು ಸಿದ್ಧಳಿರದಾಗ ನೀವು ಆಯಾಸವಿಲ್ಲದಲೇ ಅದನ್ನು ಮನ್ನಿಸಿಬಿಡಬೇಕು.

(ಹ. 9–3–1940)

* * *

ಉತ್ತಮ ರೀತಿಯಲ್ಲಿ ದೇಶಸೇವೆಯನ್ನು ಸಲ್ಲಿಸಲು ಅವಿವಾಹಿತಗಳಾಗಿಯೇ ಉಳಿಯಬೇಕೆಂದು ಉತ್ಸುಕಗಳಾಗಿದ್ದ ಉತ್ತಮ ಕಾರ್ಯನಿರತ ಸೋದರಿಯೊಬ್ಬಳು ಇತ್ತೀಚೆಗೆ ತನ್ನ ಕನಸಿನ ಸಂಗಾತಿಯನ್ನು ಕಂಡುದರಿಂದ ಮದುವೆಯಾದಳು. ಮದುವೆಯಾದುದರಿಂದ ತಾನು ತಪ್ಪನ್ನು ಮಾಡಿದೆನೆಂದೂ, ತನ್ನ ಮುಂದಿಟ್ಟುಕೊಂಡಿದ್ದ ಹಿರಿಯ ಆದರ್ಶದಿಂದ ಪತಿತಳಾದೆನೆಂದೂ ಆಕೆ ಭಾವಿಸಿಕೊಂಡಿದ್ದಾಳೆ. ಆಕೆಯ ಈ ಮನೋಭ್ರಾಂತಿಯನ್ನು ತೊಡೆದುಹಾಕಲು ನಾನು ಪ್ರಯತ್ನಿಸಿದೆ. ಕನ್ಯೆಯರು ಸೇವಾಕಾಂಕ್ಷೆಯಿಂದ ಅವಿವಾಹಿತರಾಗಿ ಉಳಿಯುವುದು ನಿಜವಾಗಿಯೂ ಶ್ರೇಷ್ಠ ವಿಷಯವೇ! ಅದರೆ ಅವರಲ್ಲಿ ಹತ್ತು ಲಕ್ಷಕ್ಕೊಬ್ಬರು ಈ ರೀತಿ ಅವಿವಾಹಿತರಾಗಿ ಉಳಿಯಬಹುದು. ಮದುವೆ ಬಾಳಿನಲ್ಲಿ ಬರುವ ಒಂದು ನಿಸರ್ಗದತ್ತ ಸಂಸ್ಕಾರವಾಗಿರುವುದರಿಂದ, ಅದನ್ನು ಕೀಳೆಂದು ಭಾವಿಸುವುದು ಪೂರ್ಣ ತಪ್ಪು. ಯಾರಾದರೂ ಮದುವೆ ತಮ್ಮ ಪತನಕ್ಕಿದೆಯೆಂದು

ಕಲ್ಪಿಸಿದರೆ, ಅವರು ಎಷ್ಟೇ ಪ್ರಯತ್ನ ಮಾಡಿದಾಗ್ಯೂ ತಮ್ಮನ್ನು ತಾವೇ ಉತ್ತರಿಸಿಕೊಳ್ಳುವುದು ಸಾಧ್ಯವಿಲ್ಲ. ಮದುವೆಯ ಆದರ್ಶವೆಂದರೆ ಮದುವೆಯನ್ನು ಪವಿತ್ರವೆಂದು ತಿಳಿದುಕೊಳ್ಳುವುದು; ಹಾಗೂ ಮದುವೆಯಾದ ಮೇಲೆ ಆತ್ಮ ಸಂಯಮದ ಜೀವನವನ್ನು ನಡೆಸುವುದು. ಮದುವೆ ಹಿಂದೂಧರ್ಮದ ನಾಲ್ಕಾಶ್ರಮಗಳಲ್ಲಿ ಒಂದು. ಉಳಿದ ಮೂರೂ ಆಶ್ರಮಗಳು ಇದರ ಆಸ್ತಿವಾರದ ಮೇಲೆಯೇ ನಿಂತಿರುತ್ತದೆ. ಆದರೆ ದುರ್ದೈವದಿಂದ ಮದುವೆಯನ್ನು ಈ ಆಧುನಿಕ ಯುಗದಲ್ಲಿ ಗಂಡಹೆಂಡಿರ ಒಂದು ಶಾರೀರಿಕ ಸಂಯೋಜನೆಯೆಂದು ಭಾವಿಸುತ್ತಾರೆ,

ಮೇಲೆ ಹೇಳಿದ ಸೋದರಿ ಮತ್ತು ಇವಳಂತೆಯೇ ವಿಚಾರಿಸುವ ಬೇರೆ ಸೋದರಿಯರು ವಿವಾಹವನ್ನು ಕೀಳೆಂದು ಎಣಿಸದೆ, ಬಾಳಿನಲ್ಲಿ ಬರುವ ಈ ಸಂಸಾರಕ್ಕೆ ತಕ್ಕದಾದ ಸ್ಥಾನವನ್ನಿತ್ತು ಅದನ್ನು ಪವಿತ್ರವೆಂದೆಣಿಸಬೇಕು. ಅವರು ಅವಶ್ಯವಿರುವಷ್ಟು ಆತ್ಮಸಂಯಮವನ್ನು ಆಚರಿಸಿದರೆ, ಅವರ ಆಂತರಿಕ ಜೀವನದಿಂದಲೇ ಅವರಿಗೆ ಸೇವೆಗಾಗಿ ಹೆಚ್ಚಿನ ಶಕ್ತಿ ಬೆಳೆಯುವುದೆಂಬುದನ್ನು ಅವರು ಕಂಡುಕೊಂಡರು. ಸೇವೆ ಮಾಡಬಯಸುವಾಕೆ ಸ್ವಾಭಾವಿಕವಾಗಿಯೇ ತನ್ನ ಮನಸ್ಸಿನೊಲವಿನಂತೆ ಒಲವಿರುವ ಜೀವನ ಜೊತೆಗಾರನನ್ನೇ ಆರಿಸಿಕೊಳ್ಳುವಳು. ಅಂಥ ಜೊತೆಗಾರರ ಸಂಯುಕ್ತ ಸೇವೆ ದೇಶಕ್ಕೊಂದು ಲಾಭವಾದೀತು. ಯಾರು ಬುದ್ಧಿವಂತ, ಸಶಕ್ತ, ಹೃಷ್ಟಪುಷ್ಟ ಮಕ್ಕಳನ್ನು ದೇಶಕ್ಕೆ ಕೊಡುವರೊ ಅವರು ನಿಜವಾಗಿಯೂ ದೇಶಕ್ಕೆ ಒಂದು ಹಿರಿದಾದ ಸೇವೆಯನ್ನು ಸಲ್ಲಿಸಿದಂತಾಗುವುದು. ಇದರ ಸತ್ಯಾಂಶವೆಂದರೆ, ಯಾರಲ್ಲಿ ಸೇವಾಧರ್ಮವು ಉಜ್ವಲವಾಗಿದೆಯೋ ಅವರು ಜೀವನದ ಯಾವ ಸ್ಥಾನದಲ್ಲಿದ್ದರೂ ಸೇವೆ ಮಾಡುವರು.

(ಹ. 22–3–1942)



# ಸಂತತಿ ನಿಯಂತ್ರಣ

ಸಂತತಿ ನಿಯಂತ್ರಣದ ಅವಶ್ಯಕತೆಯ ವಿಷಯದಲ್ಲಿ ಮತಭೇದಕ್ಕೆ ಅವಕಾಶವೇ ಇಲ್ಲ. ಆದರೆ ಪ್ರಾಚೀನ ಕಾಲದಿಂದಲೂ ಪರಂಪರೆಯಾಗಿ ಬಂದ ಒಂದೇ ಒಂದು ರೀತಿಯೆಂದರೆ ಬ್ರಹ್ಮಚರ್ಯ ಅಥವಾ ಆತ್ಮಸಂಯಮ. ಅದನ್ನು ಪಾಲಿಸುವವರಿಗೆ ಒಳಿತನ್ನು ಮಾಡುವ ದೋಷರಹಿತ ಉತ್ತಮ ಉಪಾಯವೇ ಅದಾಗಿದೆ. ಸಂತತಿ ನಿಯಮದ ಕೃತಕೋಪಾಯಗಳನ್ನು ಶೋಧಿಸುವ ಬದಲು ಆತ್ಮನಿಗ್ರಹ ಸಾಧನಗಳನ್ನು ಶೋಧಿಸಿದರೆ ವೈದ್ಯಶಾಸ್ತ್ರಜ್ಞರಿಗೆ ಮನುಕುಲವೇ ಋಣಿಯಾಗುವುದು. ಸ್ತ್ರೀ ಪುರುಷರ ಸಂಯೋಗವು ಬರೀ ಭೋಗಕ್ಕಾಗಿರದೆ ಸಂತತಿ ಜನನಕ್ಕಾಗಿದೆ. ಸಂತತಿಯ ಇಚ್ಛೆಯಿಲ್ಲದಿರುವಾಗ ಮಾಡಿದ ಸ್ತ್ರೀ ಸಂಭೋಗವು ಮಹಾಪರಾಧ.

ದುರಾಚಾರಕ್ಕೆ ಉತ್ತೇಜನವು ಕೃತಕ ಉಪಾಯಗಳಿಂದ ದೊರೆಯುತ್ತದೆ. ಸ್ತ್ರೀಯರನ್ನೂ ಪುರುಷರನ್ನೂ ನೀವು ಸ್ವೇಚ್ಛಾಚಾರಿಗಳನ್ನಾಗಿ ಮಾಡುವಿರಿ. ಲೋಕಾಭಿಪ್ರಾಯವು ಸಂಯಮಗಳಿಗೆ ಕೊಡುತ್ತಿರುವ ಗೌರವವು, ಕೃತಕ ಉಪಾಯಗಳಿಗೆ ನೀಡಲಾಗುತ್ತಿರುವ ಆದರದಿಂದ ಹಾಳಾಗಿ ಹೋಗುವುದು. ಕೃತಕ ಉಪಾಯಗಳ ಅಂಗೀಕಾರದಿಂದ ನಪುಂಸಕತ್ವವೂ, ಸ್ನಾಯು ದೌರ್ಬಲ್ಯವೂ ಉಂಟಾಗುವುದು ನಿಶ್ಚಿತ. ಬೇನೆಗಿಂತ ಮದ್ದೇ ಕೆಟ್ಟುದೆಂಬುದು ಕಂಡುಬರುವುದು. ತನ್ನ ಕೃತಿಗಳ ಹೊಣೆಯನ್ನು ತಪ್ಪಿಸಿಕೊಳ್ಳಲು ಪ್ರಯತ್ನಿಸುವುದು ತಪ್ಪು ಹಾಗೂ ಅನೈತಿಕ. ಅತಿಯಾಗಿ

ಉಣ್ಣುವವನು ಹೊಟ್ಟೆ ಕಡಿತದಿಂದ ನರಳುವುದು ಹಾಗು ಬಳಿಕ ಉಪವಾಸ ಮಾಡುವುದು ಯೋಗ್ಯ. ಹೊಟ್ಟೆಬಾಕತನಕ್ಕೆ ಅನಿರ್ಬಂಧ ಅವಕಾಶವನ್ನು ಕೊಟ್ಟು ಅದರ ಪರಿಣಾಮಗಳನ್ನು ತಪ್ಪಿಸಿಕೊಳ್ಳಲು ಪೌಷ್ಟಿಕ ಔಷಧಗಳನ್ನಾಗಲಿ, ಪಟಕಚೂರ್ಣಾದಿಗಳನ್ನಾಗಲಿ ಸೇವಿಸುವುದು ಲೇಸಲ್ಲ. ತನ್ನ ಪಶುವಿಹಾರಗಳಿಗೆ ಯಥೇಷ್ಟ ಅವಕಾಶವನ್ನು ಕೊಟ್ಟು ಅದರ ಪರಿಣಾಮಗಳನ್ನು ತಪ್ಪಿಸಿಕೊಳ್ಳುವುದು ಅದಕ್ಕಿಂತಲೂ ನಿಂದ್ಯವಾದುದು. ತನ್ನ ನಿಯಮಗಳನ್ನು ಉಲ್ಲಂಘಿಸಿದವರ ಮೇಲೆ ಪ್ರಕೃತಿಯು ನಿರ್ದಯಳಾಗಿರುವುದರಿಂದ ತನ್ನ ಪೂರ್ಣಸೇಡನ್ನು ತೀರಿಸಿಕೊಳ್ಳುವಳು. ನೈತಿಕ ಪರಿಣಾಮಗಳು ನೈತಿಕ ಸಂಯಮಗಳಿಂದಲೇ ಉಂಟಾಗುವವು. ಉಳಿದ ಸಂಯಮಗಳು ಅವುಗಳ ಮುಖ್ಯೋದ್ದೇಶವನ್ನೇ ಹಾಳುಮಾಡಿ ಬಿಡುವವು. ಕೃತಕ ಉಪಾಯಗಳನ್ನು ಯೋಚಿಸುವಲ್ಲಿ ಕಂಡುಬರುವ ಬುದ್ಧಿವಾದದ ಬುಡದಲ್ಲಿ ಇಂದ್ರಿಯ ಭೋಗವು ಅವಶ್ಯವೆಂಬ ಕಲ್ಪನೆಯಿದೆ. ಇದಕ್ಕಿಂತ ಹೆಚ್ಚಿನ ಸದೋಷ ವಿಚಾರವು ಇನ್ನೊಂದಿಲ್ಲ. ಸಂತತಿ ನಿಯಮಗೊಳಿಸಲು ಆತುರರಾಗಿರುವವರು ಪುರಾತನ ಕಾಲದಿಂದ ಯೋಚಿಸಲ್ಪಟ್ಟಿದ್ದ ನೀತಿಪೂರ್ಣವಾದ ನಿಯಮಗಳನ್ನು ಪೂರ್ಣವಾಗಿ ಸಂಶೋಧಿಸಿ ಅವುಗಳನ್ನು ಹೇಗೆ ಪುನರುಜ್ಜೀವಿಸಬಹುದೆಂಬುದನ್ನು ಕಂಡುಹಿಡಿಯಲಿ. ಅವರ ಮುಂದೆ ಬೆಟ್ಟದಷ್ಟು ಕೆಲಸ ಬಿದ್ದಿದೆ. ಬಾಲ ವಿವಾಹಗಳು ಜನಸಂಖ್ಯೆಯ ಬೆಳವಣಿಗೆಗೆ ಕಾರಣಗಳಾಗಿವೆ. ಅನಿಯಂತ್ರಿತ ಪ್ರಜಾಸಂಖ್ಯೆಯ ಅನರ್ಥಕ್ಕೆ ಇಂದಿನ ಜೀವನದ ರೀತಿಯೂ ಕಾರಣವಾಗಿದೆ. ಈ ಕಾರಣಗಳನ್ನು ಪರಾಮರ್ಶಿಸಿ, ಯೋಗ್ಯ ಉಪಾಯಗಳನ್ನು ಕಂಡುಹಿಡಿದರೆ ಸಮಾಜವು ನೈತಿಕ ದೃಷ್ಟಿಯಿಂದ ಉನ್ನತವಾಗುವುದು. ಆತುರರಾದ ಉತ್ಸಾಹಿಗಳು ಇದನ್ನು ಕಡೆಗಣಿಸಿ ಕೃತಕ ಉಪಾಯಗಳಿಗೆ ಉತ್ತೇಜನವನ್ನಿತ್ತು ಅವು ದಿನ ಬಳಕೆಯ ಕಾರ್ಯಗಳಾಗುವಂತೆ ಮಾಡಿದರೆ ನೈತಿಕ ಅಧೋಗತಿಯ ಹೊರತು ಬೇರಿನ್ನಾವ ಫಲವೂ

ದೊರೆಯದು. ವಿವಿಧ ಕಾರಣಗಳ ಮೂಲಕ ಈಗಾಗಲೇ ನಲುಗಿದ ಸಮಾಜವು ಕೃತಕ ಉಪಾಯಗಳ ಅಂಗೀಕಾರದಿಂದ ಮತ್ತಷ್ಟು ಬಲಹೀನವಾಗುವುದು. ಕೃತಕ ಉಪಾಯಗಳನ್ನು ಸುಲಭವಾಗಿ ಪುರಸ್ಕರಿಸುವ ಮಹಾಶಯರು ಮತ್ತೊಮ್ಮೆ ಈ ವಿಷಯವನ್ನು ಅಭ್ಯಸಿಸುವುದು ಒಳಿತು. ಮತ್ತು ತಮ್ಮ ಅಪಾಯಕರ ಚಟುವಟಿಕೆಗಳನ್ನು ತಡೆಹಿಡಿದು ವಿವಾಹಿತರಿಗೂ ಹಾಗೂ ಅವಿವಾಹಿತರಿಗೂ ಬ್ರಹ್ಮಚರ್ಯೆಯಿಂದಾಗುವ ಹಿತವನ್ನು ಬಿಂಬಿಸಬೇಕು. ಸಂತತಿ ನಿಯಮಕ್ಕೆ ಇದೊಂದೇ ನೇರವಾದ ಹಾಗು ಉದಾತ್ತವಾದ ಉಪಾಯ.

(ಯ.ಇ. 11–3–1925)

* * *

"ಸಂತತಿ ನಿಯಂತ್ರಣದ ಬದಲು ನೀವು ಸಂಯಮವನ್ನು ಹೆಚ್ಚಾಗಿ ಮೆಚ್ಚುತ್ತಿರಾ?" ಎಂದು ಸ್ವಾಮಿ ಯೋಗಾನಂದರು ಒಮ್ಮೆ ಗಾಂಧೀಜಿಗೆ ಹೇಳಿದರು.

"ಕೃತಕ ಸಂತತಿ ನಿಯಮವಾಗಲೀ ಅಥವಾ ಪಾಶ್ಚಿಮಾತ್ಯರ ಬೆಂಬಲವನ್ನು ಪಡೆದು ಇಂದಿನವರು ಬೋಧಿಸುವ ಸಂತತಿ ನಿಯಮವಾಗಲಿ ಆತ್ಮಘಾತಕವೆಂದು ನಾನು ತಿಳಿಯುತ್ತೇನೆ. ನಾನು ಆತ್ಮಘಾತಕವೆಂದು ಹೇಳುವಾಗ ಅದರಿಂದ ಸಮಗ್ರ ಮಾನವ ಕುಲವೇ ನಾಶವಾಗುವುದೆಂದು ಹೇಳದಿದ್ದರೂ ಇದು ಹೆಚ್ಚು ಗಂಡಾಂತರಕಾರಿಯಾದದ್ದು. ಈ ಪದ್ಧತಿಯು ನಮ್ಮನ್ನು ಪಶುಗಳಿಕ್ಕಿಂತಲೂ ಕೀಳು ಮಾಡುತ್ತದೆಯಲ್ಲದೆ, ಅನೀತಿಪರರನ್ನಾಗಿಯೂ ಮಾಡುತ್ತದೆ" ಎಂದರು ಗಾಂಧೀಜಿ.

"ಈ ವಿವೇಚನಾರಹಿತವಾದ ಪ್ರಜೋತ್ಪತ್ತಿಯನ್ನು ಎಷ್ಟು ದಿವಸ ನಾನು ಸಹಿಸಬೇಕು? ನಾನೊಬ್ಬ ಮನುಷ್ಯನನ್ನು ನೋಡಿದ್ದೇನೆ; ಅವನು ಒಂದು ಸೇರು ಹಾಲು ಕೊಂಡು ಪ್ರತಿ ವರುಷವೂ

ಬೆಳೆಯುತ್ತಿರುವ ತನ್ನ ಮಕ್ಕಳಿಗೆಲ್ಲಾ ಹಂಚಿಕೊಡಲು ಅದರಲ್ಲಿ ಹೆಚ್ಚೆಚ್ಚು ನೀರು ಕೂಡಿಸುತ್ತಲೇ ಹೋಗುತ್ತಿದ್ದನು. ಇದನ್ನು ನೀವು ಪಾಪವೆಂದು ಪರಿಗಣಿಸಲಾರಿರಾ?"

"ಬೇಡದ ಮಕ್ಕಳನ್ನು ಹೆರುವುದು ಪಾಪವೇ ಸರಿ. ಆದರೆ ತನ್ನ ಕೃತಿಯ ಪರಿಣಾಮವನ್ನು ತಾನು ಎದುರಿಸದಿರುವುದು ಇದಕ್ಕೂ ಹೆಚ್ಚಿನ ಪಾಪವಾಗಿದೆ. ಇದು ಅಮಾನುಷತ್ವವೇ ಸರಿ."

"ಈ ಸತ್ಯವನ್ನು ಹೇಳುವುದಕ್ಕೆ ನಾವು ಯಾವ ವ್ಯಾವಹಾರಿಕ ಮಾರ್ಗವನ್ನು ಹಿಡಿಯಬೇಕು?" ಎಂದು ಮತ್ತೆ ಪ್ರಶ್ನಿಸಿದರು ಸ್ವಾಮೀಜಿ.

"ಪೂರ್ಣ ವ್ಯಾವಹಾರಿಕ ಮಾರ್ಗವೆಂದರೆ ಆತ್ಮಸಂಯಮವನ್ನು ಆಚರಿಸುವುದು. ಇದರ ಉಪದೇಶಕ್ಕಿಂತಲೂ ಆಚರಣೆಯೇ ಉತ್ತಮವಾದದ್ದು."

"ಆದರೆ ಪಶ್ಚಿಮದವರು, –'ನೀವು ಪಾಶ್ಚಿಮಾತ್ಯರಿಗಿಂತಲೂ ಹೆಚ್ಚಿನ ಆಧ್ಯಾತ್ಮವಾದಿಗಳೆಂದು ಹೇಳಿಕೊಡುತ್ತೀರಿ. ಆದರೂ ನಿಮ್ಮಲ್ಲಿ ನಮಗಿಂತಲೂ ಮಕ್ಕಳು ಹೆಚ್ಚು ಮೃತಪಡುತ್ತಾರಲ್ಲದೆ ನೀವು ಜೀವನವನ್ನು ನಮಗಿಂತಲೂ ಅದೇಕೆ ಕೀಳುದೃಷ್ಟಿಯಿಂದ ನೋಡುತ್ತೀರಿ?' ಎಂದೆನ್ನುತ್ತಾರೆ. ಮಹಾತ್ಮಾಜಿ, ನೀವು ಹೆಚ್ಚು ಮಕ್ಕಳನ್ನು ಬಯಸುತ್ತೀರಾ?"

"ನನಗೆ ಹೆಚ್ಚು ಮಕ್ಕಳ ಬಯಕೆಯಲ್ಲಿ ನಂಬಿಕೆಯೇ ಇಲ್ಲ."

"ಆಮೇಲೆ ಸಮಗ್ರ ಮನುಕುಲವೇ ನಷ್ಟವಾಗುವುದಲ್ಲ?" ಎಂದರು ಸ್ವಾಮಿ ಯೋಗಾನಂದರು.

"ಅದು ನಿರ್ಮೂಲವಾಗುವುದಿಲ್ಲ; ಇದ್ದುದಕ್ಕಿಂತಲೂ ಬೇರೊಂದು ಉತ್ತಮ ರೀತಿಯಲ್ಲಿ ರೂಪಾಂತರವನ್ನು ಹೊಂದುತ್ತದೆ. ಆದರೆ ನಾವು ಅನಂತಕಾಲದಿಂದಲೂ ನಮ್ಮ ಪೂರ್ವಜರಿಂದ ಈ ಲೈಂಗಿಕ ಸ್ಫೂರ್ತಿಯನ್ನು ಪಡೆದಿರುವುದರಿಂದ ಹೀಗೆಂದೂ ಆಗುವುದಿಲ್ಲ. ಈ

ಪರಂಪರೆಯಿಂದ ಬಂದ ರೂಢಿಯನ್ನು ತಡೆಯುವ ಉಪಾಯವು ಸುಲಭವಾಗಿದ್ದರೂ, ಇದಕ್ಕೆ ಅಪ್ರತಿಮ ಶಕ್ತಿ ಬೇಕು. ಇದಕ್ಕೆ ಆದರ್ಶವಾದದ್ದೆಂದರೆ ಸಂಪೂರ್ಣ ವಿಸರ್ಜನೆ ಅಥವಾ ಪೂರ್ಣ ಬ್ರಹ್ಮಚರ್ಯೆ. ನೀವು ಇದನ್ನು ನಂಬುವ ಧೈರ್ಯ ಮಾಡದಿದ್ದರೆ, ಮದುವೆಯಾಗಬಹುದು; ಆದರೂ ಕೂಡ ಆತ್ಮಸಂಯಮವನ್ನು ನೀವು ಆಚರಿಸಬಹುದು."

"ಇದನ್ನೇ ಜನತೆಗೆ ಹೇಳಲಿಕ್ಕೆ ಯಾವ ಪದ್ಧತಿಯನ್ನು ನಾವು ಆಚರಿಸಬೇಕು?" ಎಂದು ಮತ್ತೆ ಸವಾಲು ಹಾಕಿದರು ಸ್ವಾಮಿ ಯೋಗಾನಂದರು.

"ಅದೇ, ನಾನು ಸ್ವಲ್ಪ ಹೊತ್ತಿನ ಹಿಂದೆ ಹೇಳಿದಂತೆ ನೀವು ಪೂರ್ಣವಾಗಿ ಆತ್ಮಸಂಯಮವನ್ನು ಮಾಡಿಕೊಂಡು ಜನತೆಯಲ್ಲಿ ಹೋಗಿ ಇರುವುದು. ಎಲ್ಲ ಸುಖೋಪಂಭೋಗಗಳನ್ನು ನಿರಾಕರಿಸಿ, ಆತ್ಮಸಂಯಮದಿಂದ ಸಾಗಿಸುವ ಜೀವನ ಜನತೆಯ ಮೇಲೆ ತನ್ನ ಪರಿಣಾಮವನ್ನು ಬೀರದೆ ಇರದು. ಆತ್ಮಸಂಯಮ ಹಾಗು ಅಭಿರುಚಿಯ ಸಂಯಮಗಳ ಮಧ್ಯೆ ಅಭಿನ್ನವಾದ ಸಂಬಂಧವಿದೆ. ಅಂತಲೇ ಯಾವನು ಬ್ರಹ್ಮಚರ್ಯೆಯನ್ನು ಅಭ್ಯಸಿಸುತ್ತಾನೋ ಅವನಿಗೆ ಅವನ ಎಲ್ಲ ಕೃತಿಗಳ ಮೇಲೂ ಸಂಯಮವು ಬರುವುದಲ್ಲದೆ, ಅವನು ನಿರಹಂಕಾರಿಯೂ ಆಗುತ್ತಾನೆ."

"ನೀವು ಹೇಳಿದ್ದು ನನಗೆ ತಿಳಿಯಿತು" ಎಂದು ಸ್ವಾಮೀಜಿಯವರು ಮುಂದುವರಿದು "ಜನಸಾಮಾನ್ಯರಿಗೆ ಆತ್ಮಸಂಯಮದ ಸುಖವೇ ಅರ್ಥವಾಗದಲ್ಲದೆ, ಅದನ್ನು ನಾವು ಅವರಿಗೆ ತಿಳಿಸಿಕೊಡಬೇಕಾಗುವುದು, ಆದರೆ ಪಾಶ್ಚಿಮಾತ್ಯರು ಎತ್ತಿ ತೋರಿಸುತ್ತಿರುವ, ಈ ಮೊದಲು ನಾನು ಹೇಳಿದ ವಿಚಾರಪ್ರಣಾಲಿಗೆ ನಿಮ್ಮ ಪ್ರತಿಕ್ರಿಯೆ ಏನು?" ಎಂದು ಕೇಳಿದರು.

"ಪಾಶ್ಚಿಮಾತ್ಯರಿಗಿಂತಲೂ ಹೆಚ್ಚು ಅಧ್ಯಾತ್ಮವಾದಿಗಳು ನಾವಿರುವೆವೆಂದು ನನಗನಿಸುವುದಿಲ್ಲ. ಅದರರ್ಥ ಅವರು ಹೆಚ್ಚು ಅಧ್ಯಾತ್ಮವಾದಿಗಳೆಂದಲ್ಲ. ಯಾರಿಗೆ ಅಧ್ಯಾತ್ಮದ ಕಡೆ ಒಲವಿರುತ್ತದೆಯೋ ಅವರು ದೀರ್ಘಾಯುಷಿಗಳಿರಬೇಕೆಂದಿಲ್ಲ; ಅವರು ಉತ್ತಮ ಜೀವನ ನಡೆಸಿದರೆ ಸಾಕು" ಎಂದರು ಗಾಂಧೀಜಿ.

(ಹ. 7–9–1935)

* * *

ಪಾಶವಿ ಕಾಮೇಚ್ಛೆಯನ್ನು ತೃಪ್ತಿಪಡಿಸುವುದು ಅವಶ್ಯಕವೆಂದೂ ಅಪಾಯಕರವಲ್ಲವೆಂದೂ, ಪಾಪರಹಿತವೆಂದೂ ನಾವು ನಂಬುವುದಾದರೆ, ಅದಕ್ಕೆ ಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟು, ಅದರಿಂದ ನಮ್ಮ ನಿಗ್ರಹಶಕ್ತಿಯನ್ನೇ ಕಳೆದುಕೊಂಡುಬಿಡುತ್ತೇವೆ. ಇದಕ್ಕೆ ಪ್ರತಿಯಾಗಿ ಕಾಮೋಪಭೋಗವು ಅಪಾಯಕರವೆಂದೂ ಪಾಪಯುಕ್ತವೆಂದೂ, ಅನಾವಶ್ಯಕವೆಂದೂ, ನಿಗ್ರಹ ಸಾಧ್ಯವೆಂದೂ ನಾವು ಭಾವಿಸುವುದಾದರೆ, ಅದೇ ಆತ್ಮನಿಗ್ರಹವು ಪೂರ್ಣ ಸುಲಭವೆಂಬ ಅರಿವು ನಮಗಾಗದಿರದು.

(ಯ.ಇ. 19–7–1926)

* * *

ಈ ನಮ್ಮ ಚಿಕ್ಕ ಭೂಮಂಡಲ ನಿನ್ನೆ–ಮೊನ್ನಿನ ಆಟಿಕೆಯಲ್ಲ. ಯುಗಯುಗಗಳು ಕಳೆದರೂ ಅದು ಜನಸಂಖ್ಯೆಯ ಭಾರದಿಂದ ಬಳಲಲಿಲ್ಲ. ಹೀಗಿರುವಾಗ ಕೃತಕಸಾಧನೆಗಳ ಉಪಯೋಗದಿಂದ ಜನಸಂಖ್ಯೆಯನ್ನು ತಡೆಹಿಡಿಯಲ್ಪಡದಿದ್ದರೆ ಆಹಾರದ ಅಭಾವದಿಂದ ಆ ಜನಸಂತತಿ ನಾಶವಾದೀತೆಂಬ ಸತ್ಯ ಕೇವಲ ಕೆಲವರಿಗೆ ಹೇಗೆ ಗೋಚರವಾಗಿದೆಯೋ ಯಾರಿಗೆ ಗೊತ್ತು?

(ಯ.ಇ. 19–7–1926)



# ವರದಕ್ಷಿಣೆ

ಕನ್ಯೆಯನ್ನು ಮದುವೆಯಾಗಲು ಬೆಲೆಯನ್ನು ಸೆಳೆದುಕೊಳ್ಳುವ ಹೀನವೃತ್ತಿಯನ್ನು ತುಚ್ಛವೆಂದು ತಿಳಿದುಕೊಳ್ಳದಿರುವುದೇ ನಮ್ಮ ದುರ್ಭಾಗ್ಯವಾಗಿದೆ.

(ಹ. 5–2–1936)

* * *

ಒಬ್ಬ ಸುದ್ದಿಗಾರನು ವೃತ್ತಪತ್ರಿಕೆಯಲ್ಲಿಯ ಸುದ್ದಿಯನ್ನು ಕತ್ತರಿಸಿ ಅದನ್ನು ನನಗೆ ಕಳುಹಿಸುತ್ತ, "ಸಿಂಧ–ಹೈದರಾಬಾದದಲ್ಲಿ ಈಚೆಗೆ ಭೀತಿಯನ್ನುಂಟು ಮಾಡುವಷ್ಟು ವರಗಳ ಬೇಡಿಕೆ ಹೆಚ್ಚುತ್ತದೆ" ಎಂದು ತಿಳಿಸಿದ್ದಾನೆ. ಇಂಪೀರಿಯಲ್ ಎಂಜನಿಯರಿಂಗ ಇಲಾಖೆಯ ಸೇವಕನೊಬ್ಬ ಮದುವೆಯ ನಿಶ್ಚಯದ ದಿವಸವೇ 20,000 ರೂಪಾಯಿ ವರದಕ್ಷಿಣೆಯನ್ನು ಸೆಳೆದುಕೊಂಡು, ಮದುವೆಯ ದಿನವೂ ಹಾಗು ಬೇರೆ ಆ ಮದುವೆಗೆ ಸಂಬಂಧಿಸಿದ ಸಮಾರಂಭಗಳಲ್ಲಿಯೂ ಅಪಾರ ಕೊಡುಗೆಗಳ ವಾಗ್ದಾನವನ್ನು ಪಡೆದನಂತೆ. ಮದುವೆ ಮಾಡಿಕೊಳ್ಳುವ ಯಾವುದೇ ಯುವಕನು ವರದಕ್ಷಿಣೆಯ ಕರಾರನ್ನು ಹಾಕಿದರೆ, ಅವನು ತನ್ನ ಶಿಕ್ಷಣಕ್ಕೂ ಹಾಗೂ ದೇಶಕ್ಕೂ ಅಪಮಾನವೆಸಗಿದಂತಾಗುತ್ತದೆಯಲ್ಲದೆ ಸ್ತ್ರೀಕುಲಕ್ಕೆನೇ ಅಗೌರವವನ್ನು ತೋರಿಸಿದಂತಾಗುತ್ತದೆ. ದೇಶದಲ್ಲೀಗ ವಿವಿಧ ಯುವಜನ ಚಳವಳಿಗಳಿರುವುದರಿಂದ ಅವರೆಲ್ಲರೂ ಇಂಥ ಸಮಸ್ಯೆಗಳಿಗೆ ಪರಿಹಾರವನ್ನು ಒದಗಿಸಲು ಪ್ರಯತ್ನಿಸುವರೆಂದು

ನಾನು ಆಶಿಸುತ್ತೇನೆ. ಇಂಥ ಸಂಸ್ಥೆಗಳು ಸುಧಾರಣೆಗಳನ್ನು ಮಾಡುವ ತಮ್ಮ ಕರ್ತವ್ಯಗಳನ್ನು ಬಿಟ್ಟು, ಕೇವಲ ಆತ್ಮಸ್ತುತಿಯ ಸಂಸ್ಥೆಗಳಾಗಿಬಿಡುತ್ತಿವೆ. ಆದರೂ ಇಂಥ ಸಂಸ್ಥೆಗಳು ಆಗಾಗ ಸಾರ್ವಜನಿಕರಲ್ಲಿ ಜಾಗೃತಿಯನ್ನು ಹುಟ್ಟಿಸುವುದರಿಂದ ಶ್ಲಾಘನೀಯವಾದ ಕಾರ್ಯಗಳನ್ನು ಮಾಡುತ್ತವೆ. ಈ ಕಾರ್ಯ ಮಾಡುವ ಯುವಕರು ಸಾರ್ವಜನಿಕರಿಂದ ಪಡೆಯುವ ಮೆಚ್ಚಿಗೆಯನ್ನೇ ತಮ್ಮ ಪ್ರತಿಫಲವೆಂದು ತಿಳಿಯಬೇಕೆಂಬುದನ್ನು ಮರೆಯಬಾರದು. ಇಂಥ ಕಾರ್ಯವು ಮನಃಪ್ರೇರಣೆಯ ಸುಧಾರಣೆಯಿಂದ ಕೂಡದೇ ಹೋದರೆ ಯುವಕರಲ್ಲಿ ಅನುಚಿತ ಆತ್ಮತೃಪ್ತಿಯುಂಟಾಗುವುದಲ್ಲದೆ, ಅವರು ಅನೀತಿಪರರೂ ಆಗಬಹುದು. ಈ ಅಪಮಾನಕರ ವರದಕ್ಷಿಣೆಯ ಪದ್ಧತಿಯನ್ನು ಖಂಡಿಸಲು ಪ್ರಬಲವಾದ ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸಬೇಕು. ಇಂಥ ಅನ್ಯಾಯದಿಂದ ತಮ್ಮ ಹಸ್ತಗಳನ್ನೆಲ್ಲ ಹೊಸಲು ಮಾಡಿಕೊಳ್ಳುವ ಯುವಕರನ್ನು ಸಮಾಜದಿಂದ ಬಹಿಷ್ಕರಿಸಬೇಕು. ಕನ್ಯಾಪಿತೃಗಳೂ ಕೂಡ ಆಂಗ್ಲ ಪದವಿಗಳ ಮೋಹಕ್ಕೊಳಗಾಗದೇ, ತಮ್ಮ ಹೆಣ್ಣುಮಕ್ಕಳಿಗೆ ಧೈರ್ಯವಂತ ಯುವಕರನ್ನೂ ಪಡೆಯಲು ತಮ್ಮ ಸಂಕುಚಿತ ಜಾತಿ ಹಾಗು ಪ್ರಾಂತಗಳಿಂದ ಹೊರಗೆ ಹೋಗಲು ಹಿಂದೆ ಮುಂದೆ ನೋಡಬಾರದು.

(ಯ.ಇ. 21–6–1928)

ಒಬ್ಬ ಸುದ್ದಿಗಾರಳು ಹೀಗೆ ಬರೆಯುತ್ತಾಳೆ:

“ತಂದೆ ತಾಯಿಗಳು ಗಂಡು ಮಕ್ಕಳಿಗೆ ಸ್ವತಂತ್ರ ಜೀವನೋಪಾಯವನ್ನರಸಲು ಶಿಕ್ಷಣ ಕೊಡಿಸುವಂತೆ ಹೆಣ್ಣು ಮಕ್ಕಳಿಗೂ ಶಿಕ್ಷಣ ಕೊಡಿಸಿದರೆ ಅವರು ತಮ್ಮ ಹುಡುಗಿಯರಿಗೆ ವರಾನ್ವೇಷಣೆ ಮಾಡುವ ಆತಂಕವು ತಪ್ಪುತ್ತದೆ. ಹುಡುಗಿಯರು ಸಾಕಷ್ಟು ವಿಧದಲ್ಲಿ ಮಾನಸಿಕ ಬೆಳವಣಿಗೆಯನ್ನು ಮಾಡಿಕೊಳ್ಳುವ ಅವಕಾಶ ಹೊಂದಿ, ಗೌರವ ರೀತಿಯಲ್ಲಿ ತಮ್ಮ ಕಾಲ

ಮೇಲೆ ತಾವು ನಿಲ್ಲುವಂತಾದರೆ, ಅವರಿಗೆ ವಿವಾಹವನ್ನು ಮಾಡಿಕೊಳ್ಳಬೇಕೆಂದೆನಿಸಿದಾಗ ವರನನ್ನು ಹುಡುಕುವುದು ದುಸ್ತರವೆಂದೆನಿಸಲಾರದು. ಇದರಿಂದ ಹುಡುಗಿಯರಿಗೆ ಉಚ್ಚಶಿಕ್ಷಣವನ್ನೇ ಕೊಡಿಸಬೇಕೆಂದು ನಾನು ಪ್ರತಿಪಾದಿಸುವೆನೆಂದು ಅರ್ಥಮಾಡಿಕೊಳ್ಳಬಾರದು. ಸಹಸ್ರಾರು ಹುಡುಗಿಯರಿಗೆ ಈ ಶಿಕ್ಷಣವನ್ನು ಕೊಡಿಸುವುದು ಸಾಧ್ಯವಿಲ್ಲೆಂದು ನಾನು ತಿಳಿದಿದ್ದೇನೆ. ಹುಡುಗಿಯರಿಗೆ ಉಪಯುಕ್ತ ಜ್ಞಾನ ಮತ್ತು ತಮ್ಮ ತಂದೆ ತಾಯಿಗಳನ್ನಾಗಲೀ ಅಥವಾ ಭಾವಿಪತಿಯನ್ನಾಗಲೀ ಅವಲಂಬಿಸದೆ ಯಾವದಾದರೂ ಒಂದು ಉದ್ಯೋಗವನ್ನಾಶ್ರಯಿಸಿ ಜಗತ್ತಿನಲ್ಲಿ ಸ್ವತಂತ್ರವಾಗಿ ಬಾಳಬಲ್ಲೆನೆಂಬ ನಂಬಿಕೆ ಹಾಗು ಧೈರ್ಯಗಳನ್ನು ಹುಟ್ಟಿಸುವಂಥ ಶಿಕ್ಷಣವನ್ನು ಕೊಡಬೇಕೆಂದು ನಾನು ಪ್ರತಿಪಾದಿಸುತ್ತೇನೆ. ಕೆಲವು ಹುಡುಗಿಯರು ತಮ್ಮ ಗಂಡಂದಿರಿಂದ ತ್ಯಜಿಸಲ್ಪಟ್ಟು ಪುನಃ ಅವರೊಂದಿಗೆ ಗೌರವಯುತವಾಗಿ ಜೀವನ ಸಾಗಿಸುವುದನ್ನು ನಾನು ಅರಿತಿದ್ದೇನೆ. ಕಾರಣ, ಗಂಡಂದಿರಿಂದ ತ್ಯಕ್ತರಾದ ಸಮಯದಲ್ಲಿ ಆ ಹುಡುಗಿಯರಿಗೆ ಸ್ವಾವಲಂಬಿಯಾಗುವ ಸುಯೋಗ ಬಂದುದು ಹಾಗು ಸಾಮಾನ್ಯ ಶಿಕ್ಷಣದ ತರಬೇತಿ ದೊರೆತುದು. ವಿವಾಹ ಯೋಗ್ಯ ವಯಸ್ಸಿನ ಹೆಣ್ಣುಮಕ್ಕಳನ್ನು ಪಡೆದಿರುವ ತಂದೆ-ತಾಯಿಗಳ ಕಷ್ಟವನ್ನು ಪರಿಗಣಿಸುವಾಗ ಈ ಪ್ರಶ್ನೆಯಲ್ಲಿ ಅಡಗಿರುವ ಉದ್ದೇಶವನ್ನು ಒತ್ತಿ ಹೇಳುವಿರೆಂದು ನಾನಾಶಿಸುತ್ತೇನೆ."

"ಈ ಸುದ್ದಿಗಾರರು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ನಾನು ಹೃತ್ಪೂರ್ವಕವಾಗಿ ಒಪ್ಪುತ್ತೇನೆ" ಎಂದು ಗಾಂಧೀಜಿ 05-09-1936ರ ಹರಿಜನದಲ್ಲಿ ಹೇಳಿದ್ದಾರೆ.

ಬಂಗಾಲಿಗಳೊಬ್ಬರು ತಮ್ಮ ಮಗಳ ಮದುವೆಗಾಗಿ ವರದಕ್ಷಿಣೆ ಸಂಗ್ರಹಿಸಲು ಗಾಂಧೀಜಿಗೆ ಕೇಳಿಕೊಂಡಾಗ ಅವರು ಈ ರೀತಿ ಬರೆದರು:-

ಈ ಸಮಯದಲ್ಲಿ ನಾವು ಈ ಬಂಗಾಲಿ ತಂದೆಗೆ ಅವರು ಕೇಳಿದ ಸಹಾಯಕ್ಕೆ ಪ್ರತಿಯಾಗಿ ಕೊಡುವುದು ಸಾಲವಾಗಲಿ ಅಥವಾ ಕಾಣಿಕೆಯಾಗಲಿ ಅಲ್ಲ; ಅದು ತಂದೆತಾಯಿಗಳಿಗೆ ತಮ್ಮ ಮಗಳಿಗಾಗಿ ಹಣ ಕೊಟ್ಟು ಅಳಿಯನನ್ನು ಕೊಳ್ಳಬೇಡಿರೆಂದು ಮನತಿರುಗಿಸಲು ಪ್ರಯತ್ನಿಸುವುದು. ಹಣಕೊಡದೆ ಅವಳಿಗಾಗಿ ಜೊತೆಗಾರನನ್ನು ಹುಡುಕಲಿ ಅಥವಾ ಮಗಳೇ ವರದಕ್ಷಿಣೆ ಅಲ್ಲದೆ ತನ್ನ ಪ್ರೀತಿಯಿಂದಲೇ ಗಂಡನನ್ನು ಹುಡುಕಿಕೊಳ್ಳಲಿ. ಹೀಗೆ ಮಾಡುವುದರಿಂದ ಆಯ್ಕೆಯ ರಂಗವನ್ನು ಅವರವರಿಗೇ ಬಿಟ್ಟುಕೊಟ್ಟಂತಾಗುವುದು. ಪ್ರಾಂತೀಯ ಮತ್ತು ಜಾತೀಯ ಸಂಕುಚಿತ ಬಂಧನವಿರಬಾರದು. ಭಾರತವು ಅವಿಭಾಜ್ಯ ಹಾಗು ಒಂದೇ ಆದುದಾಗಿದ್ದರೆ, ಪರಸ್ಪರರು ಕೂಡಿ ಉಣ್ಣದಂಥ ಮತ್ತು ಪರಸ್ಪರರು ಮದುವೆಯಾಗದಂಥ ಈ ಚಿಕ್ಕ ಚಿಕ್ಕ ಗುಂಪುಗಳು ಕೃತ್ರಿಮವಾಗಿ ಅಸ್ತಿತ್ವದಲ್ಲಿರಲೇಬಾರದು. ಈ ಕ್ರೂರ ಸಂಪ್ರದಾಯದಲ್ಲಿ ಧರ್ಮವೇ ಇಲ್ಲ. ಇದರಿಂದ, ಸಮಾಜವು ಪೂರ್ಣವಾಗಿ ಬದಲಾಗುವತನಕ, ವೈಯಕ್ತಿಕವಾಗಿ ಯಾರೂ ಈ ಸುಧಾರಣೆಯನ್ನು ಪ್ರಾರಂಭಿಸಬಾರದೆನ್ನುವ ವಿವಾಹಕ್ಕೆ ಆಸ್ಪದವನ್ನೇ ಕೊಡುವುದಿಲ್ಲ. ಅಮಾನುಷವಾದ ಸಂಪ್ರದಾಯಗಳನ್ನು ಮುರಿಯುವ ಕೆಲ ಎದೆಗಾರರಿಗೆ ವ್ಯತಿರಿಕ್ತವಾಗಿ ಯಾವ ಸುಧಾರಣೆಯೂ ಬೆಳಕಿಗೆ ಬಂದಿಲ್ಲ.

(ಹ. 25–7–1937)

* * *

ಇಲ್ಲಿ ಅಸಹ್ಯಕರವಾದ ವರದಕ್ಷಿಣೆಯ ಪದ್ಧತಿ ಇರುವುದರಿಂದ ಯುವತಿಯರಿಗೆ ಯೋಗ್ಯ ವರಗಳು ದೊರೆಯುವುದೇ ದುಸ್ತರವಾಗಿದೆಯೆಂದು ನಾನು ಕೇಳಿದ್ದೇನೆ. ಪ್ರೌಢ ಹುಡುಗಿಯರು ಇಂಥ ಸೆಳೆತಗಳನ್ನು ಪ್ರತಿಭಟಿಸಲು ಪ್ರಾರಂಭಿಸಿದರೆ ನಿಮ್ಮಲ್ಲಿ ಕೆಲವರು ಆಜೀವಪರ್ಯಂತವೂ, ಕೊನೆಯಪಕ್ಷ

ಕೆಲವರು ಹಲವು ವರ್ಷಗಳವರೆಗೂ ಅವಿವಾಹಿತರಾಗಿಯೇ ಉಳಿಯಬಹುದು. ನೀವು ಹೀಗೆಯೇ ಕನ್ಯೆಯರಾಗಿ ಇರಲು ಪ್ರಾರಂಭಿಸಿದರೆ ನಿಮ್ಮ ವಿವಾಹಕಾಲವು ಪ್ರಾಪ್ತವಾದಾಗ ಅಥವಾ ನಿಮ್ಮ ಜೀವನ ಸಂಗಾತಿಯನ್ನು ಪಡೆಯಬೇಕೆಂದೆನಿಸಿದಾಗ ನೀವು ವರನ ಹಣ, ಕೀರ್ತಿ, ರೂಪ ಇವುಗಳ ಬಗ್ಗೆ ಹಾತೊರೆಯುವುದಿಲ್ಲ. ತನ್ನ ಅನುಪಮ ಗುಣಗಳಿಂದ ಚಾರಿತ್ರ್ಯವಂತನಾಗುವಂಥ ವರನನ್ನು ಪಾರ್ವತಿಯು ಹೇಗೆ ಆರಿಸಿಕೊಂಡಳೋ ಹಾಗೆ ನೀವೂ ಆರಿಸಿಕೊಳ್ಳುವಿರಿ. ನಾರದಮುನಿ ಪಾರ್ವತಿದೇವಿಗೆ ಶಿವನನ್ನು ಕುರಿತು ಹೇಳುವಾಗ 'ಶಿವನು ಕಡುಬಡವ, ಬೂದಿಬಡಕ, ಕುರೂಪಿ ಬ್ರಹ್ಮಚಾರಿ' ಎಂದು ಹೇಳಿದನು. ಇದಕ್ಕೆ ಪಾರ್ವತಿಯು "ಅಹುದು; ಆದರೂ ಆತನೇ ನನ್ನ ಪತಿ" ಎಂದು ಉತ್ತರವನ್ನಿತ್ತಳು. ಪಾರ್ವತಿಯಂತೆ ಪತಿಯನ್ನು ಪಡೆಯಲು ಸಹಸ್ರವರುಷಗಳ ಕಾಲ ತಪಸ್ಸನ್ನಾಚರಿಸದಿದ್ದರೂ ಕೆಲವು ಕಾಲದವರೆಗಾದರೂ ತಪಸ್ಸನ್ನಾಚರಿಸದೆ ಶಿವನಂಥವರನ್ನು ನೀವು ಪಡೆಯಲಾರಿರಿ. ದುರ್ಬಲ ಮಾನವರಾದ ನಾವು ಆ ರೀತಿ ಮಾಡುವುದು ಅಸಾಧ್ಯವಾದರೂ ನೀವು ನಿಮ್ಮ ಜೀವಾವಧಿಯಲ್ಲಿ ಆ ರೀತಿ ಆಚರಿಸಬಹುದು.

ನೀವು ಈ ನಿಯಮಗಳನ್ನು ಒಪ್ಪಲು ಸಿದ್ಧರಾದರೆ, ನೀವು ಮೂರ್ತಿಪೂಜೆಯಲ್ಲಿ ಮಗ್ನರಾಗಲು ನಿರಾಕರಿಸಬಹುದು; ಆದರೆ ಪಾರ್ವತಿ, ದಮಯಂತಿ, ಸೀತಾ ಹಾಗೂ ಸರಸ್ವತಿಯರಂತಾಗಲು ಆಕಾಂಕ್ಷಿಸಬಹುದು.

('ಗಾಂಧೀಜಿಯೊಂದಿಗೆ ಸಿಲೋನಿನಲ್ಲಿ', ಪು. 148–49)



## ವಿಧವೆಯರ ವಿಲಾಪ

ಕೆಲ ವಿಧವೆಯರ ಪುನರ್ವಿವಾಹವಾಗಬೇಕಾದದ್ದು ಅವಶ್ಯವಿದೆ. ನಮ್ಮ ತರುಣರು ತಮ್ಮಷ್ಟಕ್ಕೆ ತಾವೇ ಪರಿಶುದ್ಧವಾದ ಮೇಲೆ ಈ ಸುಧಾರಣೆಯನ್ನು ಆಚರಣೆಯಲ್ಲಿ ತರಬೇಕು. ಅವರೆಲ್ಲರೂ ಪರಿಶುದ್ಧರಿರುವರೆ? ತಮ್ಮ ಶಿಕ್ಷಣದಿಂದ ಅವರೆಲ್ಲರೂ ಪ್ರಯೋಜನವನ್ನು ಪಡೆದಿರುವರೆ? ನಾವು ಪರಿಶ್ರಮಪೂರ್ವಕವಾಗಿ, ಬಾಲ್ಯದಿಂದಲೂ ದಾಸ್ಯವನ್ನೇ ಬೆಳೆಸಿಕೊಂಡು ಬಂದಿದ್ದೇವೆ. ಆದುದರಿಂದ ನಾವು ಸ್ವತಂತ್ರವಾಗಿ ವಿಚಾರ ಮಾಡಲು ಅಸಮರ್ಥರಾದಾಗ ಸ್ವತಂತ್ರ ರೀತಿಯಲ್ಲಿ ವರ್ತಿಸುವುದು ಹೇಗೆ ಸಾಧ್ಯ? ನಾವು ಜಾತಿಯ, ವಿದೇಶಿ ಶಿಕ್ಷಣದ ಹಾಗು ಸರಕಾರದ ದಾಸರಾಗಿದ್ದೇವೆ. ನಮಗೆ ಕೊಟ್ಟ ಪ್ರತಿಯೊಂದು ಸವಲತ್ತುಗಳು ನಮ್ಮ ಶೃಂಖಲೆಗಳಾಗಿ ಪರಿಣಮಿಸಿವೆ. ನಮ್ಮಲ್ಲಿ ಅನೇಕ ಸುಶಿಕ್ಷಿತ ತರುಣರಿರುವರು. ಅವರಲ್ಲಿ ಎಷ್ಟು ಜನರು ತಮ್ಮ ಮನೆಯಲ್ಲಿಯ ವಿಧವೆಯರನ್ನು ಕುರಿತು ವಿಚಾರಿಸಿರಬಹುದು! ಎಷ್ಟು ಮಂದಿ ಆ ಮೋಹದ ಲಾಭವನ್ನು ಪ್ರತಿರೋಧಿಸಿರಬಹುದು! ಕೆಲವರಾದರೂ ಅವರನ್ನು ಸೋದರಿಯರಂತೆಯೂ ಹಾಗೂ ತಾಯಿಯಂತೆಯೂ ಗೌರವಿಸಿ ಅವರನ್ನು ರಕ್ಷಣೆ ಮಾಡಬಹುದೆ? ಇಂಥ ಕಾರ್ಯದ ಭಾರವನ್ನು ಹೊರಲು ಎಷ್ಟು ಜನರಿಗೆ ತಮ್ಮ ನಂಬಿಕೆಗಳನ್ನು ದೃಢಪಡಿಸಿಕೊಂಡು ತಮ್ಮ ಜಾತಿಯ ವಿರುದ್ಧ ಹೋರಾಡಲು ಸಾಧ್ಯವಾದೀತು? ಯಾರು ಆ ಬಡ ವಿಧವೆಯರನ್ನು ಭೆಟ್ಟಿಯಾಗುವವರು? ನಾನವಳಿಗೆ ಯಾವ ಸೌಕರ್ಯವನ್ನು

ತಂದುಕೊಡಬಲ್ಲೆ? ಎಷ್ಟು ಜನರು 'ನವಜೀವನ'ವನ್ನು ಓದಬಲ್ಲರು? ಓದಿದವರಲ್ಲಿ ಎಷ್ಟು ಜನ ಅದರಲ್ಲಿ ಹೇಳಿದಂತೆ ನಂಬಿಕೆಯಿಟ್ಟು ನಡೆಯಬಲ್ಲರು? ಆದಾಗ್ಯೂ ನಾನು 'ನವಜೀವನ' ಪತ್ರಿಕೆಯಲ್ಲಿ ವಿಧವೆಯರ ವಿಲಾಪದ ಬಗ್ಗೆ ಸಾಕಷ್ಟು ಅವಕಾಶವನ್ನಿತ್ತಿರುವನಲ್ಲದೆ, ಪ್ರಸಂಗ ಬಂದಾಗ ಅದಕ್ಕಾಗಿ ಶ್ರಮಿಸುವ ಹಾರೈಕೆಯನ್ನು ಕಟ್ಟಿಕೊಂಡಿದ್ದೇನೆ. ಅಂತಲೇ, ಯಾರ ರಕ್ಷಣೆಯಲ್ಲಿ ಬಾಲವಿಧವೆಯರಿರುವರೋ ಅವರ ಮದುವೆ ಮಾಡುವ ಕರ್ತವ್ಯ ಅವರ ಮೇಲಿದೆಯೆಂದು ಅವರು ತಿಳಿದುಕೊಳ್ಳಬೇಕೆಂದು ನಾನವರನ್ನು ಪ್ರಾರ್ಥಿಸುತ್ತೇನೆ.

(ಯ.ಇ. 4-2-1926)

* * *

ಬಾಲಕಿಯರ ಮೇಲೆ ಒತ್ತಾಯಪೂರ್ವಕವಾಗಿ ಹೇರುವ ವೈಧವ್ಯದ ಕ್ರೂರ ಪಾತಕಕ್ಕಾಗಿ ಹಿಂದುಗಳಾದ ನಾವು ಪ್ರತಿನಿತ್ಯವೂ ಅಮೂಲ್ಯವಾದ ಬೆಲೆಯನ್ನೀಯುತ್ತೇವೆ. ಇಂಥ ವೈಧವ್ಯಕ್ಕೆ ಶಾಸ್ತ್ರಗಳಲ್ಲೆಲ್ಲಿಯೂ ಪ್ರಮಾಣಗಳಿಲ್ಲ. ವಿವೇಚನಾತ್ಮಕ ಬುದ್ಧಿಯಿಂದ ತಮ್ಮ ಜೊತೆಗಾರರ ಪ್ರೀತಿಗಾಗಿ ಯಾರಾದರೂ ಸ್ವಯಂ ವಿಧವೆಯರಾಗಲು ಸಿದ್ಧರಾದರೆ, ಅದು ಜೀವನಕ್ಕೆ ಶೋಭೆಯನ್ನೂ ಹಾಗು ಗೌರವವನ್ನು ತರುತ್ತಿದೆ. ಅದು ಮನೆಯನ್ನು ಪವಿತ್ರವನ್ನಾಗಿ ಮಾಡುವುದಲ್ಲದೆ, ಧರ್ಮವನ್ನೇ ಎತ್ತಿ ಹಿಡಿಯುವುದು. ಧರ್ಮವಾಗಲಿ ಅಥವಾ ಸಂಪ್ರದಾಯವಾಗಲಿ ಒತ್ತಾಯಪೂರ್ವಕವಾಗಿ ವೈಧವ್ಯವನ್ನು ಹೇರುವುದು ಅಸಹ್ಯವಾದ ನೊಗವಾಗಿರುವುದಲ್ಲದೆ, ಇದು ರಹಸ್ಯವಾಗಿ ಮನೆಯನ್ನೆ ಮಲಿನವಾಗಿ ಮಾಡುವುದರ ಜೊತೆಗೆ ಧರ್ಮವನ್ನೂ ಅಧಃಪತನಕ್ಕಿಳಿಸುತ್ತಿದೆ.

ಒಬ್ಬರ ಮೇಲೊಬ್ಬರು ಬಿದ್ದು 50 ವರ್ಷದಾಚೆಯಿರುವ, ವ್ಯಾಧಿಯಿಂದ ಬಳಲುವ ಕೆಲವೃದ್ಧರು ಹುಡುಗಿಯನ್ನು ತಮ್ಮ

ಹೆಂಡಂದಿರನ್ನಾಗಿ ಮಾಡಿಕೊಳ್ಳುವುದನ್ನಾಗಲಿ ಅಥವಾ ಮಾರಲಿಕ್ಕೆ ತೆಗೆದುಕೊಳ್ಳುವುದನ್ನಾಗಲಿ ವಿಚಾರಿಸುವಂಥವರ ಮೂಗಿನಲ್ಲಿ ಹಿಂದೂ ವೈಧವ್ಯತನದ ದುರ್ವಾಸನೆ ಬಾರದಿದ್ದೀತೆ? ನಮ್ಮ ಮಧ್ಯದಲ್ಲಿ ಸಹಸ್ರಾರು ವಿಧವೆಯರು ಇರುವಷ್ಟು ಕಾಲವೂ ನಾವು ಈಗಲೋ ಅಥವಾ ಇನ್ನಾವಾಗಲೋ ಸ್ಫೋಟವಾಗುವಂಥ ಗಣಿಯ ಮೇಲೆ ಕುಳಿತುಕೊಂಡಂತೆಯೇ! ನಾವು ಪರಿಶುದ್ಧರಿರುವುದಾದರೆ, ನಾವು ಹಿಂದೂಧರ್ಮವನ್ನು ರಕ್ಷಿಸಬೇಕಿದ್ದರೆ, ಈ ಒತ್ತಾಯದಿಂದ ಹೇರುವ ವೈಧವ್ಯದ ವಿಷವನ್ನು ಹೇಗಾದರೂ ಮಾಡಿ ದೂರಿರಿಸಬೇಕು. ಈ ಸುಧಾರಣೆಯನ್ನು ತರಲು ಪ್ರಯತ್ನಿಸುವವರೆಲ್ಲ ತಮ್ಮ ಅಧೀನದಲ್ಲಿದ್ದ ವಿಧವೆಯರ ಕೈಯನ್ನು ತಮ್ಮ ಕೈಯಲ್ಲಿ ತೆಗೆದುಕೊಳ್ಳುವ ಧೈರ್ಯದಿಂದ ಪ್ರಾರಂಭಿಸಿ ಆ ವಿಧವೆಯರು ಯೋಗ್ಯರೀತಿಯಲ್ಲಿ ಮದುವೆಯಾಗುವಂತೆ ನೋಡಿಕೊಳ್ಳಬೇಕು. ಅವರದು ಪುನರ್ವಿವಾಹವಾಗಬಾರದು. ಅವರೆಂದೂ ಮದುವೆಯನ್ನೇ ಮಾಡಿಕೊಂಡವರಾಗಿರಬಾರದು

(ಯ.ಇ. 5–8–1926)

* * *

ದೊಡ್ಡ ಪ್ರಮಾಣದ ಮೇಲೆ ನಾನು ವಿಧವೆಯ ಪುನರ್ವಿವಾಹಗಳನ್ನು ಪ್ರತಿಪಾದಿಸಿಲ್ಲ. ಈ ದರಿದ್ರ ಹಾಗು ನಿರ್ಭಾಗ್ಯ ಬಾಲವಿಧವೆಯರಿಗೆ ಪತಿವ್ರತಾಧರ್ಮದ ಬಗ್ಗೆ ಏನೂ ಜ್ಞಾನವಿರುವುದಿಲ್ಲ. ಅವರು ಪ್ರೇಮಕ್ಕೆ ಹೊಸಬರು. ಬಾಲಕಿಯರ ಮದುವೆ ಮಾಡಿ ಅವರ ಗಂಡನೆಂದು ಕರೆಸಿಕೊಳ್ಳಲ್ಪಡುವ ವ್ಯಕ್ತಿ ಕಣ್ಮರೆಯಾದಾಗ ಅವರು ವಿಧವೆಯರೆಂದು ಸಾರುವುದು ದೇವರ ಮತ್ತು ಮಾನವರ ವಿರುದ್ಧ ಪಾತಕವನ್ನೆಸಗಿದಂತೆ.

ಹಿಂದೂವಿಧವೆ ಒಂದು ಅಮೂಲ್ಯ ಸಂಪತ್ತೆಂದು ನಾನು ಭಾವಿಸುತ್ತೇನೆ. ಅವಳು ಮಾನವತ್ವಕ್ಕೆ ಕೊಟ್ಟ ಹಿಂದೂಧರ್ಮದ ಒಂದು

ಕಾಣಿಕೆ. ಶ್ರೀಮತಿ ರಮಾಬಾಯಿ ರಾನಡೆ ಅಂಥ ಕಾಣಿಕೆಗಳಲ್ಲಿ ಒಬ್ಬಳು. ಆದರೆ ಹಿಂದೂಧರ್ಮಕ್ಕೊಂದು ಕಲೆಯಾಗಿ ಕಾಣುವ ಬಾಲವಿಧವೆಯರ ಅಸ್ತಿತ್ವದಿಂದ ರಮಾಬಾಯಿಯವರಂಥ ಅಸ್ತಿತ್ವಕ್ಕೆ ಪ್ರಾಯಶ್ಚಿತ್ತವಾಗಿ ಪರಿಣಮಿಸಲಾರದು.

(ಯ.ಇ. 19-8-1926)

* * *

ವಿದ್ಯಾರ್ಥಿಗಳನ್ನುದ್ದೇಶಿಸಿ ಗಾಂಧೀಜಿ ಈ ರೀತಿ ಹೇಳಿದರು:-

ನೀವು ವಿಧವೆಯಲ್ಲದೆ ಹುಡುಗಿಯನ್ನು ಮದುವೆ ಮಾಡಿಕೊಳ್ಳದಿರುವುದಾಗಿಯೂ, ವಿಧವಾ ಹುಡುಗಿಯನ್ನೇ ಮದುವೆಗಾಗಿ ಶೋಧಿಸುವದಾಗಿಯೂ ಮತ್ತು ವಿಧವಾ ಹುಡುಗಿ ದೊರೆಯದೇ ಹೋದರೆ ಮದುವೆಯನ್ನೇ ಮಾಡಿಕೊಳ್ಳುವುದಿಲ್ಲವಾಗಿಯೂ ಪವಿತ್ರವಾದ ಪ್ರತಿಜ್ಞೆಯನ್ನು ಸ್ವೀಕರಿಸಬೇಕೆಂದು ನಾನಾಶಿಸುತ್ತೇನೆ. ಅಂತಲೇ ತಪ್ಪನ್ನು ತಿದ್ದಲು ನಾನು ಅವರನ್ನು ವಿಧವಾ ಹುಡುಗಿಯರೆಂದು ಕರೆಯುತ್ತೇನೆ. ಕಾರಣ, ಯಾವಳು ಹತ್ತು ಹದಿನೈದು ವರ್ಷದವಳಿರುವಾಗ, ಅವಳ ಒಪ್ಪಿಗೆ ಇಲ್ಲದೆ ಅವಳಿಗೆ ಮದುವೆಯೆಂಬುದನ್ನು ಮಾಡಿ, ಅವಳು ಗಂಡನೆಂದು ಕರೆಯಲ್ಪಡುವ ವ್ಯಕ್ತಿಯೊಡನೆ ಎಂದೂ ಬಾಳದಿರುವಾಗ ಅವಳನ್ನು ವಿಧವೆಯೆಂದು ಕರೆದರೆ ಅವಳು ವಿಧವೆಯೇ ಅಲ್ಲ. ಇದು ಆ ಶಬ್ದದ ಮತ್ತು ಭಾಷೆಯ ಅಪಹಾಸ್ಯ. ರಾಷ್ಟ್ರಮಾಡುವ ಇಂಥ ಪಾಪಗಳ ಪ್ರತಿಕ್ರಿಯೆ ದೈಹಿಕವಾಗಿ ಅದರ ಮೇಲೆ ಆಗುವುದೆಂದು ಎಂಬುವಷ್ಟು ಭಾವಿಕನು ನಾನಿರುವೆ. ಆ ಪಾಪಗಳ ಮೊತ್ತವೆಲ್ಲಾ ಸಂಚಯವಾಗಿದ್ದರಿಂದಲೇ ನಾವು ದಾಸರಾಗಿರುವೆವೇನೋ ಎಂದೆನಿಸುತ್ತದೆ. ಲೋಕಸಭೆಯಿಂದ ನಿಮಗೊಂದು ಶ್ರೇಷ್ಠವಾದ ರಾಜ್ಯಘಟನೆ ದೊರಕಬಹುದು. ಆದರೆ ಆ ರಾಜ್ಯ ಘಟನೆಗಾಗಿ

ದುಡಿಯಲು ಅರ್ಹರಿದ್ದ ಹೆಣ್ಣು ಮತ್ತು ಗಂಡು ಇರದಿದ್ದರೆ ಆ ಘಟನೆಗೆ ಯಾವ ಬೆಲೆಯೂ ಇರುವುದಿಲ್ಲ. ತನ್ನ ಮೂಲಭೂತ ಆಶೆಗಳನ್ನು ಪೂರೈಸಿಕೊಳ್ಳಬೇಕೆನ್ನುವಾಗ ಹಿಂಸಾತ್ಮಕ ಪ್ರತಿಬಂಧವನ್ನು ಎದುರಿಸುವಂಥ ಒಬ್ಬಳೇ ಒಬ್ಬ ವಿಧವೆ ಇರುವಷ್ಟು ಕಾಲ ನಾವು ನಮ್ಮನ್ನಾಳಲು ಅರ್ಹರಿರುವೆವೆಂದಾಗಲಿ ಅಥವಾ ಬೇರೆಯವರನ್ನು ಆಳಲಿಕ್ಕೆ ಸಮರ್ಥರಿರುವೆವೆಂದಾಗಲಿ ಅಥವಾ 30 ಕೋಟಿ ಜನರಿರುವ ರಾಷ್ಟ್ರದ ಚಾರಿತ್ರ್ಯವನ್ನು ರೂಪಿಸಲು ಶಕ್ತರಿರುವೆವೆಂದಾಗಲಿ, ನೀವು ಭಾವಿಸುವಿರಾ? ಇದು ಧರ್ಮವಾಗದೆ ಅಧರ್ಮವಾಗಿದೆ. ನಾನು ಹಿಂದೂಧರ್ಮದ ಭಾವನೆಯಿಂದ ಪೂರ್ಣವಾಗಿ ವ್ಯಾಪಿಸಲ್ಪಟ್ಟಿರುವುದರಿಂದ ಈ ರೀತಿ ಹೇಳುತ್ತೇನೆ. ನನ್ನಲ್ಲಿ ಪಾಶ್ಚಿಮಾತ್ಯರ ಭಾವನೆ ಇದೆಯೆಂದು ಈ ರೀತಿ ಮಾತನಾಡುವೆನೆಂದು ನೀವು ತಪ್ಪು ಭಾವಿಸಬೇಡಿರಿ. ನಿರ್ಮಲವಾಗದ ಭಾರತೀಯತೆಯಿಂದ ನಾನು ಪೂರ್ಣವಾಗಿ ತುಂಬಿತುಳುಕುವೆನೆಂದು ಅಧಿಕಾರದಿಂದ ಹೇಳಬಲ್ಲೆ. ನಾನು ಪಾಶ್ಚಿಮಾತ್ಯರಿಂದ ಅನೇಕ ಸಂಗತಿಗಳನ್ನು ಸ್ವೀಕರಿಸಿದ್ದರೂ ಈ ವಿಷಯವನ್ನು ಮಾತ್ರ ಸ್ವೀಕರಿಸಿಲ್ಲ. ಈ ರೀತಿಯ ವೈಧವ್ಯಕ್ಕೆ ಹಿಂದೂ ಧರ್ಮದಲ್ಲಿ ಪ್ರಮಾಣವಿಲ್ಲ.

(ಯ.ಇ. 15-9-1927)



# ವೇಶ್ಯಾ ಸಮಸ್ಯೆ

---

ಸ್ತ್ರೀಯರನ್ನು ನಮ್ಮ ಕಾಮತೃಷ್ಣೆಗೆ ಬಲಿಗೊಡದಿರೋಣ. ದುರ್ಬಲರನ್ನು ರಕ್ಷಣೆ ಮಾಡಬೇಕೆನ್ನುವ ಧರ್ಮವು ಈ ಸಂದರ್ಭದಲ್ಲಿ ಹೆಚ್ಚು ಬೆಂಬಲವನ್ನೀಯುತ್ತದೆ. ನನಗಂತೂ ಗೋಸಂರಕ್ಷಣೆಯಲ್ಲಿಯೇ ಸ್ತ್ರೀಯರ ಪಾವಿತ್ರ್ಯದ ರಕ್ಷಣೆಯೂ ಒಳಗೊಂಡಿದೆಯೆಂದು ಅನಿಸುತ್ತದೆ. ನಾವು ನಮ್ಮ ಸ್ತ್ರೀಯರನ್ನು ತಾಯಿ ಸೋದರಿ ಹಾಗು ಮಗಳಂತೆ ಮನ್ನಿಸುವವರೆಗೂ ಭಾರತದ ಪುನರುತ್ಥಾನವಾಗದು. ನಮ್ಮಲ್ಲಿರುವ ಮಾನವೀಯತೆಯನ್ನು ಕೊಂದು ನಮ್ಮಲ್ಲಿ ಪಶುತ್ವವನ್ನು ಬಿತ್ತುವ ಪಾಪಗಳಿಂದ ನಾವು ಶುದ್ಧರಾಗೋಣ.

(ಯ.ಇ. 13–4–1921)

* * *

ಒಬ್ಬಳೇ ಒಬ್ಬ ಹೆಣ್ಣಾದರೂ, ನಮ್ಮ ಕಾಮತೃಪ್ತಿಗೋಸ್ಕರವಾಗಿ ಅವಳು ಮೀಸಲಾಗಿರುವಷ್ಟು ಕಾಲವೂ ನಾವು ನಮ್ಮ ತಲೆಯನ್ನು ನಾಚಿಕೆಯಿಂದ ತಗ್ಗಿಸಬೇಕು. ನನಗೆ, ದೇವರ ಶ್ರೇಷ್ಠ ಸೃಷ್ಟಿಯನ್ನು ನಮ್ಮ ಕಾಮವಾಸನೆಗೆ ಬಲಿಯನ್ನಾಗಿ ಕೊಟ್ಟು ಪಶುಗಳಿಗಿಂತಲೂ ಪಶುಗಳಾಗುವ ಬದಲು ಮನುಕುಲವೇ ಇಲ್ಲದಂತಾಗುವುದು ಮೇಲು ಎನಿಸುತ್ತದೆ. ಆದರೆ, ಇದು ಕೇವಲ ಭಾರತದ ಸಮಸ್ಯೆಯಾಗಿರದೆ, ಪ್ರಪಂಚದ ಸಮಸ್ಯೆಯಾಗಿದೆ. ನಾನು ಆಧುನಿಕ ಕಾಲದ ಕೃತಕವಾಗಿರುವ ಇಂದ್ರಿಯ ಭೋಗ ಸುಖದ ವಿರೋಧವಾಗಿ ಉಪದೇಶಿಸಿದರೆ ಹಾಗು ಗಂಡು ಮತ್ತು ಹೆಣ್ಣುಮಕ್ಕಳಿಗೆ ಸರಳ ಜೀವನವನ್ನು ಆಚರಿಸೆಂದು

ಕೇಳಿಕೊಂಡರೆ ನಾನೇ ಮೊದಲು ಆ ರೀತಿ ಮಾಡುತ್ತೇನೆ. ಕಾರಣ, ನಾವು ಸರಳ ಜೀವನಕ್ಕೆ ಮರಳದ ವಿನಾ ಪಶುತ್ವಕ್ಕಿಂತಲೂ ಕೀಳು ಸ್ಥಿತಿಯಲ್ಲಿರುವ ಇಳುಜಾರದಿಂದ ಪಾರಾಗುವುದೇ ಸಾಧ್ಯವಿಲ್ಲ.

(ಯ.ಇ. 21-7-1921)

* * *

ಅಬಲೆಯರೆನಿಸಿಕೊಂಡ ಸ್ತ್ರೀಯರ ಮೇಲೆ ಹೊರಿಸಿದ ಅವನತಿಗಾಗಿ ಶಾಸನಕಾರನಾದ ಮಾನವನು ಘೋರವಾದ ದಂಡವನ್ನು ತೆರಬೇಕಾಗಿದೆ. ಸ್ತ್ರೀ, ಎಂದು ಪುರುಷನ ಜಾಲದಿಂದ ಮುಕ್ತಳಾಗುವಳೋ ಅಂದೇ ಅವಳು ತನ್ನೆತ್ತರವನ್ನು ಕಂಡುಕೊಂಡು ಪುರುಷನಿರ್ಮಿತ ಶಾಸನಗಳ ಹಾಗೂ ವಿಧಿಗಳ ವಿರುದ್ಧವಾಗಿ ಬಂಡನ್ನೆಬ್ಬಿಸುವಳು. ಅವಳ ಬಂಡು, ಹಿಂಸೆಯಿಂದ ಕೂಡಿರದಿದ್ದರೂ ತುಂಬಾ ಪ್ರಭಾವಕಾರಿಯಾಗಬಲ್ಲದು.

ಭಾರತೀಯ ಪುರುಷನು, ಅನೀತಿ-ಅಧರ್ಮಪರ ಇಂದ್ರಿಯ ಭೋಗಕ್ಕೋಸ್ಕರ ಅಗೌರವಯುತ ಜೀವನವನ್ನು ನಡೆಸುತ್ತಿರುವ ಸಹಸ್ರಾರು ಸೋದರಿಯರ ದುರದೃಷ್ಟ ಕುರಿತು ಯೋಚಿಸಲಿ. ಇನ್ನೊಂದು ದುಃಖದಾಯಕ ಸಂಗತಿಯೆಂದರೆ ಈ ಸೋಂಕು ರೋಗದ ತಾಣಗಳಿಗೆ ಹೋಗುವವರಲ್ಲಿ ಹೆಚ್ಚಾಗಿ ಮದುವೆಯಾದವರೇ ಇರುವರು. ಅವರು ಇಬ್ಬಗೆಯ ಪಾಪಗಳನ್ನು ಮಾಡಿದಂತಾಗುವುದು. ತಾವು ವಿಧೇಯರಾಗಿ ಉಳಿಯುವೆವೆಂದು ವಚನಕೊಟ್ಟು ಪತ್ನಿಯರಿಗೆ ಒಂದೆಡೆ, ಇನ್ನೊಂದೆಡೆ ತಮ್ಮ ಬೆನ್ನು ಬಿದ್ದ ಸೋದರಿಯರ ಪಾವಿತ್ರ್ಯವನ್ನು ಕಾಪಾಡುವಂತೆ ಬೇರೆ ಸೋದರಿಯರ ಪಾವಿತ್ರ್ಯವನ್ನೂ ಕಾಪಾಡದದ್ದಕ್ಕೆ ಪಾಪಮಾಡುವರು. ಭಾರತೀಯರಾದ ನಮಗೆಲ್ಲ ಆತ್ಮಗೌರವದ ಪ್ರಜ್ಞೆ ಬಂದರೆ ಈ ಪಾತಕವು ಒಂದು ದಿನವೂ ನಿಲ್ಲದು.

ನಮ್ಮಲ್ಲಿ ಗೌರವಾನ್ವಿತರೆನಿಸಿಕೊಂಡ ಅನೇಕರು ಈ ಪಾಪದಲ್ಲಿ ಮುಳುಗಿರದಿದ್ದರೆ, ಈ ಉಪಭೋಗದ ಪಾತಕವು, ಹಸಿದವನೊಬ್ಬ ಹೊಟ್ಟೆಗಾಗಿ ಬಾಳೆಯ ಹಣ್ಣನ್ನು ಕದ್ದರೆ ಅಥವಾ ಹಣದ ಅವಶ್ಯಕತೆಯಿದ್ದ ಬಾಲಕನೊಬ್ಬ ಯಾರದಾದರೂ ಕಿಸೆ ಕತ್ತರಿಸಿದರೆ ಆಗುವ ಅಪರಾಧಕ್ಕಿಂತಲೂ ಹಿರಿಯ ಅಪರಾಧವಾಗಿ ಪರಿಗಣಿಸಲ್ಪಡುತ್ತಿತ್ತು. ಹೆಚ್ಚು ಕೆಡಕು ಮತ್ತು ಅಪಾಯಕರವಾದದ್ದು ಯಾವುದು? ಆಸ್ತಿಯನ್ನು ಕದಿಯುವುದೋ? ಅಥವಾ ಸ್ತ್ರೀಯಳೊಬ್ಬಳ ಮಾನವನ್ನು ಅಪಹರಿಸುವುದೋ? ಈ ಕುಲಟೆ ಹೆಣ್ಣು ತಾನೇ ತನ್ನ ಮಾರಾಟಕ್ಕೆ ಕಾರಣಳೆಂದು ಹೇಳಲ್ಪಡದಿರಲಿ. ಆದರಿದು, ಜೂಜುಕಟ್ಟೆಯಲ್ಲಿಯ ಚಾಣಾಕ್ಷ ಜೇಬುಕಳ್ಳನೊಬ್ಬ ಲಕ್ಷಾಧೀಶನ ಜೇಬು ಕತ್ತರಿಸುವ ಹಾಗಿದೆ. ಕಿಸೆಯನ್ನು ಕತ್ತರಿಸುವ ಸಣ್ಣ ಬಾಲಕನು ಹೆಚ್ಚು ಪಾತಕಿಯೋ ಅಥವಾ ತನ್ನ ಬಲೆಗೆ ಬಿದ್ದವರನ್ನು ಉನ್ಮತ್ತರನ್ನಾಗಿ ಮಾಡಿ ಅವರ ಸಹಿ ತೆಗೆದುಕೊಂಡು ಅವರ ಆಸ್ತಿಯನ್ನು ಎತ್ತಿ ಹಾಕುವ ಮೋಸಗಾರನು ಹೆಚ್ಚು ಪಾತಕಿಯೋ? ಪುರುಷನು, ನಿಗೂಢ ಮತ್ತು ನಿರ್ಬಂಧ ವಿಧಾನಗಳಿಂದ ಸ್ತ್ರೀಯರ ಅಮೂಲ್ಯವಾದ ಪ್ರಜ್ಞೆಯನ್ನೇ ಮೊದಲು ಕೊಳ್ಳೆಹೊಡೆದು, ನಂತರ ಆಕೆಯ ಮೇಲೆ ತಾನು ಮಾಡುವ ಅಪರಾಧದಲ್ಲಿ ಅವಳನ್ನು ಭಾಗಿಯಾಗುವಂತೆ ಮಾಡುವುದಿಲ್ಲವೆ? ಅಥವಾ ಕೆಲವು ಸ್ತ್ರೀಯರು ಪಂಚಮರಂತೆ-ಇಂಥ ಪತಿತ ಜೀವನಕ್ಕಾಗಿಯೇ ಹುಟ್ಟಿದ್ದಾರೆಯೇ? ಪ್ರತಿಯೊಬ್ಬ ಯುವಕನೂ ಅವಿವಾಹಿತನಿರಲಿ ಅಥವಾ ವಿವಾಹಿತನಿರಲಿ ನಾನು ಬರೆದಿರುವ ಈ ಮಾತುಗಳ ಅರ್ಥವನ್ನು ಯೋಚಿಸಲೆಂದು ನಾನವರಿಗೆ ಕೇಳಿಕೊಳ್ಳುತ್ತೇನೆ. ನಾನು ಈ ಸಾಮಾಜಿಕ ರೋಗ ಹಾಗು ನೈತಿಕ-ಕುಷ್ಟದ ಬಗ್ಗೆ ತಿಳಿದುಕೊಂಡಿರುವುದನ್ನೆಲ್ಲಾ ಬರೆಯಲಾರೆ. ಉಳಿದುದನ್ನು ತರುಣನು ತನ್ನ ಕಲ್ಪನೆಯಿಂದ ತುಂಬಿಕೊಂಡು, ತಾನೇ ಆ ಪಾಪಕ್ಕೆ ಪಕ್ಕಾಗಿದ್ದರೆ, ಅದಕ್ಕಾಗಿ ನಾಚಿಕೆಯನ್ನೂ ಹಾಗು ಹೇಸಿಗೆಯನ್ನೂ ಪಟ್ಟುಕೊಳ್ಳಲಿ. ಪ್ರತಿಯೊಬ್ಬ ಪರಿಶುದ್ಧನಾದವ್ಯಕ್ತಿ,

ತಾನು ಎಲ್ಲಿಯೇ ಇದ್ದರೂ, ತನ್ನ ನೆರೆಹೊರೆಯವರ ವಾತಾವರಣವನ್ನು ಪವಿತ್ರ ಮಾಡಲು ಪ್ರಯತ್ನಿಸಲಿ. ಈ ಎರಡನೆಯ ಮಾತನ್ನು ಆಚರಿಸುವುದಕ್ಕಿಂತಲೂ ಬರೆಯುವುದನ್ನು ನಾನು ಸುಲಭವೆಂದು ಬಲ್ಲೆ. ಇದು ಸೂಕ್ಷ್ಮವಾದ ವಿಷಯ. ಇದು ಸೂಕ್ಷ್ಮವಾಗಿರುವುದರಿಂದಲೇ ಎಲ್ಲ ವಿಚಾರವಾದಿಗಳ ಗಮನವನ್ನು ಸೆಳೆಯಲಪೇಕ್ಷಿಸುತ್ತದೆ. ಈ ದುರ್ದೈವಿ ಸೋದರಿಯರ ಮಧ್ಯದಲ್ಲಿ ನಿಂತು ಮಾಡುವ ಕಾರ್ಯವನ್ನು ಪರಿಣತರಿಗೇ ಬಿಟ್ಟುಕೊಡಬೇಕು.

(ಯ.ಇ. 16–4–1925)

* * *

ವೇಶ್ಯಾಗೃಹಗಳಿಗೆ ನಿಯಂತ್ರಣವನ್ನು ಹಾಕಬೇಕೆಂದೂ ಹಾಗೂ ಅವುಗಳಿಗೆ ರಹದಾರಿಗಳನ್ನು ಕೊಡಬೇಕೆಂದೂ ಒಂದು ಸೂಚನೆ ಬಂದಿದೆ. ಈ ವಿಷಯವಾಗಿ ಎತ್ತಿದ ವಾದವು ಇಂಥ ಇತರ ವಿಷಯಗಳಿಗೆ ಅನ್ವಯಿಸುವ ರೀತಿಯಲ್ಲಿಯೇ ಇದೆ. ಶಾಸನವನ್ನು ಮಾಡಲಿ, ಮಾಡದಿರಲಿ, ದುಷ್ಕೃತ್ಯವು ನಡೆದೇ ನಡೆಯುವುದರಿಂದ, ಅದಕ್ಕೆ ಶಾಸನದ ಬೆಂಬಲವನ್ನು ಕಲ್ಪಿಸಿ ವೇಶ್ಯಾಗೃಹಗಳಿಗೆ ಹೋಗುವವರಿಗೆ ಮಾರ್ಗವನ್ನು ಸುಗಮಮಾಡಿಕೊಡಬೇಕೆಂಬುದೇ ಅವರ ವಾದ. ಮಂತ್ರಿಗಳೇ ಈ ಜಾಲದಲ್ಲಿ ಬೀಳದಿರಲೆಂದು ನಾನಾಶಿಸುತ್ತೇನೆ. ವೇಶ್ಯಾಗೃಹಗಳನ್ನು ಕುರಿತು ಕಾರ್ಯಮಾಡುವ ಸ್ತ್ರೀಯರು ಇಬ್ಬಗೆಯ ಪ್ರಚಾರವನ್ನು ಕೈಕೊಳ್ಳಬೇಕು. (1) ಯಾರು ತಮ್ಮ ಜೀವನೋಪಾಯಕ್ಕಾಗಿ ತಮ್ಮ ಗೌರವವನ್ನೇ ಮಾರಿಕೊಳ್ಳುವರೋ ಅಂಥ ಸ್ತ್ರೀಯರೊಡನೆ ಬೆರೆಯಬೇಕು. (2) ಯಾವ ಪುರುಷರು ಅಜ್ಞಾನದಿಂದಲೋ ಅಥವಾ ಮದಾಂಧತೆಯಿಂದಲೋ ತಮ್ಮ ಸೋದರಿಯರನ್ನು ಅಬಲೆಯರೆಂದು ಕರೆಯುವರೋ ಅಂಥವರು ಚೆನ್ನಾಗಿ ನಡೆಯುವಂತೆ ಅವರಲ್ಲಿ ನಾಚಿಕೆ ಹುಟ್ಟಿಸುವುದು. ಅನೇಕ ವರುಷಗಳ ಹಿಂದೆ, ಹತ್ತೊಂಭತ್ತು ನೂರರ ಮೊದಲಲ್ಲಿ, ಮುಂಬಯಿ

ನಗರದಲ್ಲಿ ಈ ವೇಶ್ಯಾಗೃಹಗಳ ಉದ್ಧಾರಕ್ಕೆ ಟೊಂಕಕಟ್ಟಿದ ಜನಸೇನಾನಿಗಳು ತಮ್ಮ ಜೀವವನ್ನು ಲೆಕ್ಕಿಸದೆ, ಈ ಗೃಹಗಳ ಮುಂದೆ ನಿಂತು ಬಹಿಷ್ಕಾರ ಹಾಕಲು ಪ್ರಯತ್ನಿಸಿದ್ದು ನನಗಿನ್ನೂ ನೆನಪಿದೆ. ಇಂಥ ಸಂಘಟನೆಯನ್ನೇ ದೊಡ್ಡ ಪ್ರಮಾಣದ ಮೇಲೆ ಈಗೇಕೆ ಮಾಡಿ ಬಹಿಷ್ಕಾರವನ್ನು ಹಾಕಬಾರದೋ ನನಗಂತೂ ತಿಳಿಯದಾಗಿದೆ.

(ಹ. 4–9–1937)

* * *

ಕಲೆಯ ಪಾವಿತ್ರ್ಯದ ಹೆಸರಿನಲ್ಲಿಯೇ ಅಥವಾ ಬೇರೆ ದುರ್ಭಾವನೆಯಲ್ಲಿಯೇ ದುರ್ಗುಣವನ್ನೇ ಸದ್ಗುಣವನ್ನಾಗಿ ಕಾಣುವ ಪ್ರವೃತ್ತಿ ಈ ಹೀನವಾದ ಭೋಗಕ್ಕೆ ಒಂದು ಸೂಕ್ಷ್ಮ ಗೌರವದ ಆವರಣವಾಗಿ ಪರಿಣಮಿಸಿದೆ, ಈ ಪ್ರವೃತ್ತಿ ಸ್ಪಷ್ಟವಾದ ನೈತಿಕ ಕುಷ್ಠ ರೋಗಕ್ಕೆ ಒಂದು ಕಾರಣೀಭೂತವಾಗಿದೆ. ಶ್ರದ್ಧಾಶೂನ್ಯವಾಗಿರುವ ಅಥವಾ ದೇವರಲ್ಲಿ ಕೇವಲ ಯಾಂತ್ರಿಕ ನಂಬಿಕೆಯನ್ನಿಟ್ಟಿರುವ ಮತ್ತು ಸುಖಲೋಲುಪತೆಯ ವೈವಿಧ್ಯವಿರುವ ಈ ಯುಗವು, ತನ್ನ ಸಾಮ್ರಾಜ್ಯವು ಉತ್ತುಂಗಸ್ಥಿತಿಯಲ್ಲಿರುವಾಗಲೇ ಪತನ ಹೊಂದಿದ ರೋಮನಗರದ ನೆನಪನ್ನು ತಂದುಕೊಡುವುದರಿಂದ ಈ ಯುಗದ ವ್ಯಾಧಿಗೆ ಪರಿಹಾರವನ್ನು ಸೂಚಿಸುವುದು ಸುಲಭಸಾಧ್ಯವಲ್ಲ. ಕಾನೂನುಗಳಿಂದ ಪರಿಹರಿಸುವುದು ಸಾಧ್ಯವಿಲ್ಲ. ಲಂಡನ್ ನಗರವು ಈ ಪಾಪದಿಂದ ತುಂಬಿತುಳುಕುತ್ತಿದೆ. ದುರ್ಗುಣವನ್ನೇ ಒಂದು ಸಂಪ್ರದಾಯವನ್ನಾಗಿ ಮಾಡಿಕೊಂಡ ಪ್ಯಾರಿಸ್ ನಗರವು ಕುಪ್ರಸಿದ್ಧವಾಗಿದೆ. ಶಾಸನಗಳಿಂದ ಈ ವೇಶ್ಯಾವೃತ್ತಿ ಹೋಗುವಂತಿದ್ದರೆ ಈ ಸುಸಂಘಟಿತ ರಾಷ್ಟ್ರಗಳು ತಮ್ಮ ನಗರಗಳನ್ನೆಲ್ಲಾ ಈ ಪಾಪದಿಂದ ವಿಮುಕ್ತ ಮಾಡುತ್ತಿದ್ದವು. ನನ್ನಂಥ ಅನೇಕ ಸಮಾಜಸುಧಾರಕರು ಎಷ್ಟೇ ಬರೆದರು ಇದರ ಮೇಲೆ ಪ್ರಭಾವಯುತ ಪರಿಣಾಮವಾಗದು.

ಬ್ರಿಟಿಷರ ರಾಜ್ಯಭಾರಕ್ಕೆ ಮೊದಲು ಭಾರತದಲ್ಲಿ ವೇಶ್ಯಾ ವೃತ್ತಿ ಇರಲಿಲ್ಲವೆಂದಲ್ಲ. ಆದರೆ, ಅದಿಷ್ಟು ಸರ್ವಸಾಮಾನ್ಯವಾಗಿರಲಿಲ್ಲ. ಈಗ ಅದು ಮಧ್ಯಮವರ್ಗದ ಯುವಕರನ್ನು ಬಹು ತೀವ್ರವಾಗಿ ಕೆಡಿಸುತ್ತಿದೆ. ನನ್ನ ಆಸೆ ಎಲ್ಲಾ ಈ ರಾಷ್ಟ್ರದ ಯುವಕರ ಮೇಲಿದೆ. ಈ ಪಾಪಕ್ಕೆ ತುತ್ತಾಗಿರುವವರಲ್ಲಿ ಕೆಲವರು ಸ್ವಭಾವತಃ ಕೆಟ್ಟ ಗುಣದವರಲ್ಲ. ಅವರು ನಿಸ್ಸಹಾಯಕತೆಯಿಂದಲೂ ಹಾಗು ಅವಿಚಾರದಿಂದಲೂ ಇದರೆಡೆ ಆಕರ್ಷಿಸಲ್ಪಟ್ಟಿರುತ್ತಾರೆ. ಅವರು ತಮಗೂ ಮತ್ತು ಸಮಾಜಕ್ಕೂ ಆಗಿರುವ ಹಾನಿಯನ್ನು ಅರಿತುಕೊಳ್ಳಬೇಕು. ನಿಷ್ಠೆಯುತ ಶಿಸ್ತಿನ ಜೀವನವಲ್ಲದೆ ಬೇರೆ ಯಾವುದರಿಂದಲೂ ಅವರಾಗಲಿ ಅಥವಾ ದೇಶವಾಗಲಿ ಈ ವಿನಾಶದಿಂದ ವಿಮುಕ್ತಿಯನ್ನು ಪಡೆಯುವುದು ಸಾಧ್ಯವಿಲ್ಲೆಂದು ಅವರರಿತುಕೊಳ್ಳಬೇಕು. ಎಲ್ಲಕ್ಕಿಂತಲೂ ಹೆಚ್ಚಾಗಿ, ಅವರು ದೇವರನ್ನು ಸ್ಮರಿಸಿ, ತಮ್ಮನ್ನು ಈ ದುಷ್ಟ ಸೆಳೆತದಿಂದ ದೂರವಿಡೆಂದು ಪ್ರಾರ್ಥಿಸದ ವಿನಾ ಈ ಒಣ ಶಿಸ್ತಿನಿಂದ ಯಾವ ಪ್ರಯೋಜನವೂ ಆಗಲಾರದು.

ಶಾಸನಗಳಿಂದ ಮಾನವನನ್ನು ಒಳ್ಳೆಯವನನ್ನಾಗಿ ಮಾಡಲು ಸಾಧ್ಯವಿಲ್ಲವೆಂದು ನಾನು ಈ ಹಿಂದೆ ಹೇಳಿದ್ದೇನೆ. ಮನ ಒಲಿಸಿಕೊಳ್ಳುವ ಶಕ್ತಿ ನನ್ನಲ್ಲಿದ್ದಿದ್ದರೆ ಈ ದುರಾಚಾರದ ಸ್ತ್ರೀಯರು ನಟಿಯರಾಗಿ ಪಾತ್ರವಹಿಸುವುದನ್ನು ತಪ್ಪಿಸಿಬಿಡುತ್ತಿದ್ದೆ.

(ಯ.ಇ. 9–7–1925)



## ಖಾದಿ ಕೆಲಸದಲ್ಲಿ ಮಹಿಳೆಯರ ಪಾತ್ರ

ದೇವರು ನಮಗೆ ದಯಪಾಲಿಸಿದಂಥ ಮಕ್ಕಳಿಂದ ನಾವು ಸಂತುಷ್ಟರಾಗುವಂತೆ ಭಾರತವು ಉತ್ಪಾದಿಸಬಲ್ಲ ಬಟ್ಟೆಯಿಂದ ತೃಪ್ತಿಹೊಂದಲು ನಾವು ಸಿದ್ಧರಿರಲೇಬೇಕು. ಹೆರವರಿಗೆ ಕುರೂಪಿಯಾಗಿ ಕಂಡುಬಂದರೂ ಸಹ ಯಾವ ಹೆತ್ತತಾಯಿಯೂ ತನ್ನ ಮಗುವನ್ನು ಬಿಸಾಕುವುದನ್ನು ನಾನರಿಯೆ. ಇದೇ ಭಾವನೆಯು ಸ್ವದೇಶಾಭಿಮಾನಿಗಳಾದ ಭಾರತೀಯ ಸ್ತ್ರೀಯರಲ್ಲಿ ಭಾರತದಲ್ಲಿ ತಯಾರಾದ ವಸ್ತುಗಳ ಬಗ್ಗೆ ಇರಬೇಕು. ಈ ಸಂಕ್ರಮಣಕಾಲದಲ್ಲಿ ಒರಟಾದ ಖಾದಿಯೇ ನಿಮಗೆ ಹೇರಳವಾಗಿ ದೊರೆಯುತ್ತೆ. ಅದನ್ನು ನೀವು ನಿಮಗೆ ಬೇಕಾದ ಅಭಿರುಚಿಗೆ ತಕ್ಕಂತೆ ಕಲಾತ್ಮಕವಾಗಿ ಮಾಡಿಕೊಳ್ಳಬಹುದು. ಒಂದು ವೇಳೆ ನೀವು ಕೆಲವು ತಿಂಗಳಗಳವರೆಗೆ ಈ ಒರಟಾದ ಖಾದಿಯಿಂದ ತೃಪ್ತರಾಗುವಿರಾದರೆ, ಒಂದು ಕಾಲಕ್ಕೆ ಜಗತ್ತೆಲ್ಲವೂ ಅಸೂಯೆಯಿಂದ ನಿರಾಶೆಪಟ್ಟುಕೊಳ್ಳುವಂಥ ಪ್ರಾಚೀನ ಭಾರತದ ಸುಂದರ, ವರ್ಣಮಯ ವಸ್ತ್ರಗಳ ಪುನರುಜ್ಜೀವನವಾಗುವುದನ್ನು ನೋಡುವಲ್ಲಿ ಭಾರತಕ್ಕೆ ನಿರಾಶೆಗೊಳ್ಳುವ ಅಗತ್ಯವೆನಿಸಲಾರದು. ನಾವಿಂದು ಯಾವುದಕ್ಕೆ ಕಲಾತ್ಮಕವೆಂದು ಕರೆಯುತ್ತೇವೆಯೋ ಅದು ವಾಸ್ತವಿಕವಾಗಿ ಹಾಗಿಲ್ಲವೆಂದೂ, ಹಾಗು ನಿಜವಾದ ಕಲೆಯು ಕೇವಲ ಒಂದು ವಸ್ತುವಿನ ರೂಪವನ್ನಷ್ಟೇ ಪರಿಗಣಿಸದೆ ಅದರ ಹಿಂದೆ ಏನಿದೆಯೆಂಬುದನ್ನೂ ಗಣನೆಗೆ ತಂದುಕೊಳ್ಳುತ್ತದೆಯೆಂಬ ಮಾತನ್ನು ಆರು ತಿಂಗಳವರೆಗೆ ನೀವು ಮಾಡಿದ ಆತ್ಮನಿರಸನವು

ತೋರಿಸಿಕೊಡುತ್ತದೆಯೆಂದು ನಾನು ಭರವಸೆ ನೀಡುತ್ತೇನೆ. ನಿರ್ಜೀವವಾಗಿಮಾಡುವ ಕಲೆಯೂ ಇದೆ; ಜೀವಕಳೆಯನ್ನು ತುಂಬುವ ಕಲೆಯೂ ಇದೆ. ಪಶ್ಚಿಮದಿಂದ ಅಥವಾ ದೂರಪ್ರಾಚ್ಯದಿಂದ ಆಯಾತವಾಗಿರುವ ಈ ನಯವಾದ ಬಟ್ಟೆಗಳು ನಮ್ಮ ಲಕ್ಷೋಪಲಕ್ಷ ಬಂಧು-ಭಗಿನಿಯರನ್ನು ನಿರ್ಜೀವರನ್ನಾಗಿ ಮಾಡಿರುವುದಲ್ಲದೆ, ಸಾವಿರಾರು ಸೋದರಿಯರನ್ನು ನಾಚಿಕೆಪಟ್ಟುಕೊಳ್ಳುವ ಜೀವನಕ್ಕೆ ನೂಕಿವೆ. ನಿಜವಾದ ಕಲೆಯು ಅದರ ನಿರ್ಮಾತೃಗಳ ಸುಖ, ಸಂತೃಪ್ತಿ ಹಾಗು ಪಾವಿತ್ರ್ಯಗಳ ನಿದರ್ಶನವಾಗಿರಬೇಕು. ಇಂಥ ಕಲೆಯೇ ನಮ್ಮಲ್ಲಿ ಪುನರುಜ್ಜೀವಿಸಲ್ಪಟ್ಟರೆ ನಿಮ್ಮಲ್ಲಿಯ ಅತ್ಯುತ್ತಮ ಕಾರ್ಯಕರ್ತೆಯರು ಖಾದಿಯನ್ನುಪಯೋಗಿಸುವುದು ಸದ್ಯದ ಪರಿಸ್ಥಿತಿಯಲ್ಲಿ ಅನಿವಾರ್ಯವಾಗಿದೆ.

ಸ್ವದೇಶಿ ಚಳುವಳಿಯ ಯಶಸ್ವಿಗೆ ಖಾದಿಯ ಉಪಯೋಗ ಮಾಡುವುದಷ್ಟೇ ಅವಶ್ಯವಾದುದಲ್ಲ; ನಿಮ್ಮ ಬಿಡುವಿನ ಸಮಯದಲ್ಲಿ ನಿಮ್ಮಲ್ಲಿಯ ಪ್ರತಿಯೊಬ್ಬರೂ ನೂಲು ತೆಗೆಯುವುದು ಅಗತ್ಯದ್ದಾಗಿದೆ. ಪುರುಷರಿಗೆ ಹಾಗು ಹುಡುಗರಿಗೆ ನೂಲುವುದಕ್ಕೆ ನಾನು ಸೂಚಿಸಿದ್ದೇನೆ. ಅವರಲ್ಲಿಯ ಸಹಸ್ರಾರು ಜನರು ಪ್ರತಿ ದಿನ ನೂಲುತ್ತಾರೆಂಬುದೂ ನನಗೆ ಗೊತ್ತು. ಆದರೆ ನೂಲು ತೆಗೆಯುವ ಮುಖ್ಯಭಾರವು ಹಿಂದಿನಂತೆ ಈಗಲೂ ನಿಮ್ಮ ಹೆಗಲುಗಳ ಮೇಲೆಯೇ ಇದೆ. 200 ವರ್ಷಗಳ ಹಿಂದೆ ಹಿಂದೂಸ್ತಾನದ ಮಹಿಳೆಯರು ನಮ್ಮ ದೇಶದ ಬೇಡಿಕೆಗಾಗಿ ನೂಲುವುದಲ್ಲದೆ ಪರದೇಶಗಳಿಗಾಗಿಯೂ ನೂಲುತ್ತಿದ್ದರು. ಅವರು ಕೇವಲ ಒರಟಾದ ಎಳೆಗಳನ್ನಷ್ಟೇ ತೆಗೆಯುತ್ತಿರಲಿಲ್ಲ; ಜಗತ್ತಿನಲ್ಲಿಯೇ ಅತಿ ಸೂಕ್ಷ್ಮವೆಂದೆನಿಸಿದ ನೂಲನ್ನು ತೆಗೆಯುತ್ತಿದ್ದರು. ನಮ್ಮ ಪೂರ್ವಜರು ನೂತಂಥ ನೂಲಿನ ನಯವನ್ನು ಯಾವ ಯಂತ್ರದಿಂದಲೂ ಇದುವರೆಗೆ ಪಡೆಯುವುದಕ್ಕಾಗಿಲ್ಲ. ಆದುದರಿಂದ ಈ 2 ತಿಂಗಳುಗಳಲ್ಲಿ ಹಾಗು ಅದರ ಅನಂತರ

ಖಾದಿಯ ಬೇಡಿಕೆಯನ್ನು ಪೂರೈಸಬೇಕಾದರೆ ನೀವು ನೂಲುವ ಸಂಘಗಳನ್ನು ಕಟ್ಟಬೇಕು; ನೂಲುವ ಸ್ಪರ್ಧೆಗಳನ್ನೇರ್ಪಡಿಸಬೇಕು; ಹಾಗು ಭಾರತದ ಮಾರುಕಟ್ಟೆಯನ್ನು ಕೈನೂಲಿನಿಂದ ತುಂಬಿಸಿಬಿಡಬೇಕು. ಇದಕ್ಕಾಗಿ ನಿಮ್ಮಲ್ಲಿಯ ಕೆಲವರು ನೂಲುವುದರಲ್ಲಿ, ಹತ್ತಿಯನ್ನು ಹಿಂಜುವುದರಲ್ಲಿ ಹಾಗು ರಾಟಿಯನ್ನು ಸರಿಪಡಿಸಿಕೊಳ್ಳುವುದರಲ್ಲಿ ಪರಿಣತರಾಗಬೇಕು. ಇದರ ಅರ್ಥ ನೀವು ನಿರಂತರ ಕೆಲಸವನ್ನು ಮಾಡಬೇಕು. ನೂಲುವುದು ಉದರನಿರ್ವಹಣೆಯ ಒಂದು ಸಾಧನವೆಂದೆಣಿಸಬೇಡಿರಿ. ಮಧ್ಯಮವರ್ಗದವರಿಗೆ ಅದು ಕುಟುಂಬದ ಆದಾಯಕ್ಕೆ ಪೂರಕವಾಗಬೇಕು ಮತ್ತು ತೀರ ಬಡವರಿಗೆ ಮಾತ್ರ ನಿಃಸಂದೇಹವಾಗಿ ಅದು ಉದರ ನಿರ್ವಹಣೆಯ ಸಾಧನವಾಗಿದೆ. ಹಿಂದಿನ ಕಾಲದಂತೆ ಈಗಲೂ ನೂಲುವ ರಾಟಿಯು ವಿಧವೆಯ ಪ್ರೀತಿಯ ಸಹಚರಿಯಾಗಬೇಕು. ಒಂದು ವೇಳೆ ಭಾರತದ ಎಲ್ಲ ಶ್ರೀಮಂತ ಮಹಿಳೆಯರು ಪ್ರತಿ ದಿನ ನಿರ್ದಿಷ್ಟ ಪ್ರಮಾಣದಲ್ಲಿ ನೂತರೆ, ಅವರು ನೂಲನ್ನು ಅಗ್ಗ ಮಾಡುವುದಲ್ಲದೆ ಬೇಗ ಅವಶ್ಯವಿರುವಷ್ಟು ನಯವನ್ನು ತರಬಲ್ಲರು.

ಪ್ರತಿಯೊಂದು ಮಹಿಳೆಯರ ಸಭೆಯಲ್ಲಿಯೂ ನಾನು ರಾಷ್ಟ್ರೀಯ ಆಂದೋಲನಕ್ಕೆ ಅವರ ಅನುಗ್ರಹವನ್ನು ಕೇಳಿದ್ದೇನೆ. ಏಕೆಂದರೆ ನೀವು ಸಾಕಷ್ಟು ಪರಿಶುದ್ಧರೂ, ಸರಳರೂ ಹಾಗು ದೈವಿಕರೂ ಇರುವಿರೆಂಬ ನಂಬಿಕೆ ನನಗಿದ್ದುದರಿಂದ ನೀವು ಪ್ರಭಾವಶಾಲಿಯಾದ ಆಶೀರ್ವಾದಗಳನ್ನು ನೀಡಬಲ್ಲಿರಿ. ನೀವು ವಿದೇಶಿ ಬಟ್ಟೆಗಳನ್ನು ಬಿಟ್ಟುಕೊಡುವುದರಿಂದ ಹಾಗು ನಿಮ್ಮ ಬಿಡುವಿನ ಸಮಯದಲ್ಲಿ ಎಡೆಬಿಡದೆ ರಾಷ್ಟ್ರದ ಸಲುವಾಗಿ ನೂಲುವುದರಿಂದ ನಿಮ್ಮ ಅನುಗ್ರಹದ ಪ್ರಯೋಜನವನ್ನು ದೃಢಪಡಿಸಬಲ್ಲಿರಿ. ಸಾಮ್ರಾಜ್ಯಶಾಹಿಯ ನೊಗದಿಂದ ಮುಕ್ತಗೊಳಿಸುವುದಕ್ಕಾಗಿ ನಡೆದಿರುವ ಭಾರತದ

ಶಾಂತಿಯುತ ಹೋರಾಟದಲ್ಲಿ ನೂಲುವುದಕ್ಕೆ ಪುನಃ ಕೇಂದ್ರ ಸ್ಥಾನವನ್ನು ನೀಡಿದಂತಾಗಿದೆ. ನೂಲುವುದರಲ್ಲಿ ಸ್ವಾಭಾವಿಕವಾಗಿ ಅವರಿಗೆ ಪುರುಷರಿಗಿಂತ ಹೆಚ್ಚಿನ ಪ್ರಯೋಜನವಿದೆ. ನೂಲುವುದು ಸ್ತ್ರೀಯರದೇ ವೈಶಿಷ್ಟ್ಯವಾಗಿ ಉಳಿಯುತ್ತದೆಯೆಂಬುದನ್ನು ಅನುಭವವು ತೋರಿಸಿಕೊಟ್ಟಿದೆ. ಈ ಅನುಭವದ ಹಿಂದೆ ಒಂದು ಒಳ್ಳೆಯ ಕಾರಣವಿದೆಯೆಂದು ನನ್ನ ನಂಬಿಕೆ. ನೂಲುವುದು ಅವಶ್ಯವಾಗಿಯೂ ನಿಧಾನವಾಗಿ ಹಾಗೂ ನಿಶ್ಶಬ್ದವಾಗಿ ಸಾಗಬಹುದಾದ ಕಾರ್ಯವಾಗಿದೆ. ಸ್ತ್ರೀಯು ತ್ಯಾಗದ, ಅಂತೆಯೇ ಅಹಿಂಸೆಯ ಪ್ರತೀಕವಾಗಿದ್ದಾಳೆ. ಆದುದರಿಂದ ಅವಳ ವೃತ್ತಿಗಳು ಯುದ್ಧಕ್ಕಿಂತಲೂ ಶಾಂತಿಗೆ ಸಹಾಯಕವಾಗುವಂತೆ ಇವೆ, ಇರಬೇಕು.

(ಹ. 2-12-1939)

* * *

ಹಣದಲ್ಲಿಯ ಸ್ವಲ್ಪ ಭಾಗವನ್ನು ಕೊಡುವುದು ಬಹು ಸುಲಭ. ಆದರೆ ತಾನು ಸ್ವತಃ ಒಂದು ಸಣ್ಣ ಮಾತನ್ನು ಆಚರಣೆಯಲ್ಲಿ ತರುವುದು ಬಹಳ ಕಠಿಣ. ಯಾರಿಗೆ ನೀವು ಈ ಹಣವನ್ನು ಕೊಡುತ್ತಿರುವಿರೋ ಅಂಥವರ ಬಗ್ಗೆ ನಿಜವಾಗಿಯೂ ನಿಮಗೇನಾದರೂ ಅನಿಸುತ್ತಿದ್ದರೆ, ನೀವು ಒಂದು ಹೆಜ್ಜೆ ಮುಂದೆ ಹೋಗಿ ಆ ಜನರು ತಯಾರಿಸುತ್ತಿರುವಂಥ ಖಾದಿ ಬಟ್ಟೆಯನ್ನು ಧರಿಸಿರಿ. ಒಂದು ವೇಳೆ ಖಾದಿಯನ್ನು ನಿಮ್ಮೆದುರು ತಂದಾಗ, 'ಖಾದಿ ಒರಟಾಗಿದೆ ನಾವುದನ್ನು ಧರಿಸಲಾರೆವು' ಎಂದು ನೀವಂದರೆ ನಿಮ್ಮಲ್ಲಿ ಸ್ವಾರ್ಥತ್ಯಾಗ ಎಳ್ಳಷ್ಟೂ ಇಲ್ಲವೆಂದು ನಾನು ತಿಳಿದುಕೊಳ್ಳುತ್ತೇನೆ. ನೀವು ರಾಟಿಯನ್ನು ತೆಗೆದುಕೊಳ್ಳಿರಿ. ಅದರ ಜೊತೆ ಅರ್ಧ ಗಂಟೆ ಕುಳಿತುಕೊಂಡು ನಾನು ನಿಮಗೆ ವರ್ಣಿಸಿದಂಥ ಲಕ್ಷೋಪ ಲಕ್ಷ ಜನರ ಬಗ್ಗೆ ವಿಚಾರ ಮಾಡಿರಿ ಹಾಗು ದೇವರ ಹೆಸರನ್ನು ತೆಗೆದುಕೊಂಡು 'ನಾನು ಅಂಥವರಿಗಾಗಿ ನೂಲುತ್ತೇನೆ' ಎನ್ನಿರಿ. ನೀವು ವಿನೀತರಾಗಿ ಹಾಗು ಸಂಪನ್ನರಾಗಿ

ಇರುವಿರೆಂಬ ಅರಿವಿನಿಂದ ಸಮರ್ಪಣೆಯ ಈ ಕೃತಿಯನ್ನು ಮನಃಪೂರ್ವಕವಾಗಿ ಮಾಡಿದರೆ, ತೋರಿಕೆಗಾಗಿ ವೇಷವನ್ನು ಧರಿಸದೆ ನಿಮ್ಮ ಅವಯವಗಳನ್ನು ಮುಚ್ಚುವುದಕ್ಕಾಗಿ ಬಟ್ಟೆಯನ್ನುಟ್ಟರೆ, ಖಾದಿಯನ್ನು ಧರಿಸುವುದಕ್ಕಾಗಿ ಹಾಗು ನಿಮ್ಮ ಮತ್ತು ಸಾಮಾನ್ಯ ಜನತೆಯೊಡನೆ ಸಂಬಂಧ ಬೆಳೆಸುವುದಕ್ಕೆ ಹಿಂದೆ ಮುಂದೆ ನೋಡಲಾರಿರಿ.

('ಗಾಂಧೀಜಿಯೊಡನೆ ಸಿಲೋನಿನಲ್ಲಿ', ಪು. 145, 147)

* * *

ದರ್ಭಾಂಗಾದ ಖಾದಿ ಕೇಂದ್ರಗಳಿಗೆ ನನ್ನ ಜೊತೆಗೆ ಬಂದು, ರಾಟೆಯು ಅಲ್ಲಿಯ ಹಿಂದು ಹಾಗು ಮುಸಲ್ಮಾನ ಮಹಿಳೆಯರಿಗೆ ಎಂಥ ಸುಖ ಸಂತೋಷಗಳನ್ನು ತಂದು ಕೊಟ್ಟಿದೆಯೆಂಬುದನ್ನು ನೋಡಿರಿ. ಅದು ಬಹಳಷ್ಟು ಜನರಿಗೆ ಕೆಲಸವನ್ನು ಒದಗಿಸಿ ಕೊಡದಿದ್ದರೆ ಅದು ನನ್ನ ತಪ್ಪಲ್ಲ; ನಿಮ್ಮದು. ಅವರ ಕೈಯಲ್ಲಿ ತಯಾರಾದ ವಸ್ತುಗಳನ್ನು ಕೊಳ್ಳುವ ಯೋಚನೆಯನ್ನು ನೀವು ಮಾಡದಿದ್ದರೆ, ಆ ಕೆಲಸವು ಪ್ರಗತಿ ಹೊಂದಲಾರದು. ನೀವು ಕೊಂಡ ಖಾದಿಯ ಪ್ರತಿ ಗಜವೂ ಅಂಥ ಹೆಣ್ಣು ಮಕ್ಕಳ ಕೈಯಲ್ಲಿ ಕೆಲವು ಕಾಸುಗಳನ್ನು ಕೊಡುತ್ತಿದೆ. ಕೆಲವೇ ಕಾಸುಗಳು; ಹೆಚ್ಚಲ್ಲ. ಆದರೆ ಇದಕ್ಕೂ ಮುಂಚೆ ಒಂದು ಕಾಸೂ ಇಲ್ಲದವರಿಗೆ ಕೆಲವು ಕಾಸುಗಳಾದರೂ ಈಗ ದೊರೆಯುತ್ತಿವೆ.

ರಾಜಮಹೇಂದ್ರಿ ಹಾಗು ಬರಿಸಾಲದಲ್ಲಿ ನಾನು ಕೆಲವು ಪತಿತ ಸ್ತ್ರೀಯರನ್ನು ನೋಡಿದೆ. ಅವರಲ್ಲಿಯ ಒಬ್ಬ ಹುಡುಗಿ ನನ್ನ ಕಡೆಗೆ ಬಂದು ಅಂದಳು: "ಗಾಂಧೀ, ನಿಮ್ಮ ಚರಖಾ ನಮಗೇನು ಕೊಡಬಲ್ಲದು? ನಮ್ಮ ಹತ್ತಿರ ಬರುವ ಪುರುಷರು ಕೆಲವೇ ನಿಮಿಷಗಳಿಗಾಗಿ ಐದರಿಂದ ಹತ್ತು ರೂಪಾಯಿಗಳವರೆಗೆ ಕೊಡುವರು."

ನಾನು ಅವರಿಗೆ ಹೇಳಿದೆ. "ಚರಖಾ ಅಷ್ಟನ್ನು ಕೊಡಲಾರದೆಂಬುದು ನಿಜ. ಆದರೆ ಅವರು ಆ ನಾಚಿಕೆಗೇಡು ಜೀವನವನ್ನು ತ್ಯಜಿಸಿದರೆ ನಾನವರಿಗೆ ನೂಲುವುದಕ್ಕೆ ಹಾಗು ನೇಯುವುದಕ್ಕೆ ಕಲಿಸುವ ವ್ಯವಸ್ಥೆ ಮಾಡಿ ಮರ್ಯಾದೆಯ ಜೀವನೋಪಾಯವನ್ನು ಗಳಿಸಲು ಸಹಾಯ ಮಾಡುತ್ತೇನೆ" ಎಂದು. ನಾವು ಆ ಹುಡುಗಿಯ ಮಾತನ್ನು ಕೇಳುತ್ತಿದ್ದಾಗ ನನ್ನ ಮನಸ್ಸು ಅಂತರ್ಮುಖವಾಗಿ, ನಾನೇಕೆ ಹೆಣ್ಣಾಗಿ ಹುಟ್ಟಲಿಲ್ಲವೆಂದು ದೇವರನ್ನು ಕೇಳಿದೆ. ಆದರೆ ನಾನು ಹೆಣ್ಣಾಗಿ ಹುಟ್ಟದಿದ್ದರೂ ಹೆಣ್ಣಿನ ಆದರ್ಶ ಸಾಧಿಸಬಲ್ಲೆ. ಹಾಗು ಪ್ರತಿ ದಿನ ಒಂದಾಣೆಯಷ್ಟು ಕೂಡ ಸಿಗದ ಬಹುಸಂಖ್ಯ ಭಾರತೀಯ ಮಹಿಳೆಯರಿಗಾಗಿಯೇ ನಾನಿಂದು ನೂಲುವ ರಾಟೆ ಮತ್ತು ಭಿಕ್ಷಾಪಾತ್ರೆಯನ್ನು ಹಿಡಿದುಕೊಂಡು ಇಡೀ ದೇಶದ ತುಂಬ ಅಡ್ಡಾಡುತ್ತಿದ್ದೇನೆ.

○

# ಮಹಿಳೆಯರ ಸಂರಕ್ಷಣೆ

"ಗಾಂಧೀಜಿ, ಮಹಿಳೆಯರ ಮಾನವನ್ನು ಹೇಗೆ ರಕ್ಷಿಸಬೇಕು? ಎಂದು ಯಾರೋ ಕೇಳಿದಾಗ ಗಾಂಧೀಜಿ ಕೆಳಗಿ ನಂತೆ ಉತ್ತರಿಸಿದರು.

"ಈ ಪ್ರಶ್ನೆಗೆ ಎರಡು ಮುಖಗಳಿವೆ: (1) ಮಾನಿನಿಯರೇ ತಮ್ಮ ಮಾನವನ್ನು ಅದು ಹೇಗೆ ಕಾಯ್ದುಕೊಳ್ಳಬೇಕು? (2) ಆ ಮಾನಿನಿಯ ಮಾನವನ್ನು ಅವಳ ಸಂಬಂಧಿಕರಾದ ಪುರುಷರು ಹೇಗೆ ರಕ್ಷಿಸಬೇಕು?"

ಮೊದಲನೆಯ ಪ್ರಶ್ನೆಯನ್ನು ಕುರಿತು ವಿಚಾರಿಸಿದರೆ, ಎಲ್ಲಿ ಅಹಿಂಸಾತ್ಮಕ ವಾತಾವರಣವು ಇರುತ್ತಿದೆಯೋ ಹಾಗು ಎಲ್ಲಿ ಸತತವಾಗಿ ಅಹಿಂಸೆಯನ್ನು ಬೋಧಿಸುತ್ತಾರೋ ಅಲ್ಲಿ ಅವಳು ಪರಾವಲಂಬಿಯಾಗಲಿ, ದುರ್ಬಲಳಾಗಲಿ ಅಥವಾ ಅಸಹಾಯಕಳಾಗಲಿ ಇರುವ ಪ್ರಸಂಗವೇ ಉದ್ಭವವಾಗುವುದಿಲ್ಲ. ಎಲ್ಲಿ ಅವಳು ಪರಿಶುದ್ಧಳಿರುವಳೋ ಅಲ್ಲಿ ಅಸಹಾಯಕಳಾಗಿರುವ ಪ್ರಶ್ನೆಯೇ ಏಳುವುದಿಲ್ಲ. ಅವಳ ಪರಿಶುದ್ಧತೆ ಅವಳಿಗೆ ಬೆಂಗಾವಲಾಗಿ ನಿಲ್ಲುತ್ತದೆ. ಒಬ್ಬ ಮಹಿಳೆಯ ಮನಸ್ಸಿನ ವಿರುದ್ಧ ಅವಳನ್ನು ಹಿಂಸೆಗೊಳಿಸುವುದು ದೈಹಿಕವಾಗಿ ಸಾಧ್ಯವಿಲ್ಲವೆಂಬುದು ನನಗೆ ಗೊತ್ತಿದೆ. ಎಲ್ಲಿ ಹೆಣ್ಣು ಮಗಳು ಅಂಜುತ್ತಾಳೋ ಅಥವಾ ತನ್ನ ನೈತಿಕಶಕ್ತಿಯನ್ನು ಗುರುತಿಸಿಕೊಳ್ಳುವುದಿಲ್ಲವೋ ಅಲ್ಲಿ ಬಲತ್ಕಾರವು ನಡೆಯುತ್ತಿದೆ. ಅವಳಿಗೆ ಬಲಾತ್ಕಾರ ಮಾಡುವವನ ದೈಹಿಕ ಸಾಮರ್ಥ್ಯವನ್ನು ತಡೆದುಕೊಳ್ಳುವದಾಗದಿದ್ದರೆ, ಅವಳ ಪರಿಶುದ್ಧತೆ ಅವನು ಹಿಂಸೆಮಾಡುವ ಪೂರ್ವದಲ್ಲಿಯೇ ಸಾಯುವ ಶಕ್ತಿಯನ್ನು ಕೊಡುತ್ತಿದೆ. ಸೀತೆಯ ಉದಾಹರಣೆಯನ್ನು ತೆಗೆದುಕೊಳ್ಳೋಣ, ದೇಹದಿಂದ

ಅವಳು ರಾವಣನ ಮುಂದೆ ದುರ್ಬಲಳಿದ್ದರೂ ಅವಳ ಪರಿಶುದ್ಧತೆ ರಾವಣನ ರಾಕ್ಷಸಶಕ್ತಿಗೆ ಎಷ್ಟು ಪಾಲು ಮೇಲಿತ್ತು. ಅವನು ಸೀತೆಯನ್ನು ಎಲ್ಲ ರೀತಿಯಿಂದ ಮೋಹಗೊಳಿಸಲು ಪ್ರಯತ್ನಿಸಿದರೂ, ಅವಳ ಅನುಮತಿಯಿಲ್ಲದೆ ದೈಹಿಕವಾಗಿ ಅವಳನ್ನು ಮುಟ್ಟುವುದು ಅವನಿಗೆ ಸಾಧ್ಯವಾಗಲಿಲ್ಲ. ಇದಲ್ಲದೆ, ಹೆಣ್ಣುಮಗಳು ತನ್ನ ದೈಹಿಕ ಶಕ್ತಿಯನ್ನು ಅವಲಂಬಿಸಿದರೆ ಅಥವಾ ತನ್ನ ಕೈಯಲ್ಲಿದ್ದ ಆಯುಧವನ್ನು ನಂಬಿದರೆ, ಆ ಶಕ್ತಿ ಕುಂದಿದಾಗ ಅವಳು ಹತಾಶಳಾಗುವುದು ಖಂಡಿತ.

ಎರಡನೇ ಪ್ರಶ್ನೆಯನ್ನು ಸಹಜವಾಗಿ ಉತ್ತರಿಸಬಹುದು. ತಂದೆಯಾಗಲಿ, ಸೋದರನಾಗಲಿ ಅಥವಾ ಸ್ನೇಹಿತನಾಗಲಿ ಅವಳ ಮತ್ತು ಬಲಾತ್ಕಾರಮಾಡಿದವನ ಮಧ್ಯದಲ್ಲಿ ನಿಲ್ಲುವನು, ಅವನು ಬಲಾತ್ಕಾರ ಮಾಡಿದವನಿಗೆ ಆ ರೀತಿ ಮಾಡಬೇಡೆಂದು ಹೇಳಬಹುದು. ಅಥವಾ ಪ್ರತಿಬಂಧಿಸಲು ಹೋಗಿ ತಾನೇ ಅವನ ಕೈಯಲ್ಲಿ ಮರಣವನ್ನಪ್ಪಬಹುದು. ಹೀಗೆ ಮಾಡಿ ರಕ್ಷಕನು ಪ್ರಾಣವನ್ನರ್ಪಿಸುವುದರಿಂದ, ಅವನು ತನ್ನ ಕರ್ತವ್ಯವನ್ನು ಮಾಡಿದಂತಾಗುತ್ತದಲ್ಲದೆ, ಆಶ್ರಿತಳಿಗೆ ತನ್ನನ್ನು ಹೇಗೆ ರಕ್ಷಿಸಿಕೊಳ್ಳಬೇಕೆಂಬ ಬಗ್ಗೆ ಒಂದು ಶಕ್ತಿಯನ್ನು ಕೊಟ್ಟಂತಾಗುತ್ತದೆ.

“ಆದರೆ” ಪುಣೆಯ ಸೋದರಿಯೊಬ್ಬಳು ಪ್ರಶ್ನಿಸುತ್ತ “ಅಲ್ಲಿಯೇ ತಿಕ್ಕಾಟವಿರುವುದು. ಮಹಿಳೆ ಅದು ಹೇಗೆ ತನ್ನ ಪ್ರಾಣವನ್ನು ತೆತ್ತಬೇಕು? ಅವಳಿಗೆ ಮಾಡುವುದು ಸಾಧ್ಯವಾದೀತೆ?” ಎಂದಳು.

“ಓ! ಹೋ!!” ಎಂದನ್ನುತ್ತ ಗಾಂಧೀಜಿಯವರು “ಅವಳಿಗೆ ಯಾವ ದಿವಸವೂ ಪುರುಷನಿಗಿಂತ ಸುಲಭವಾಗಿ ಸಾಯಲು ಬರುವುದು. ಮಹಿಳೆಯರು ತೀರ ಅಲ್ಪ ಉದ್ದೇಶಕ್ಕಾಗಿ ತಮ್ಮ ಜೀವಗಳನ್ನೇ ಕೊಡುವುದು ನನಗೆ ಗೊತ್ತಿದೆ. ಈಗ ಕೆಲವೇ ದಿವಸಗಳ ಹಿಂದೆ, ಒಬ್ಬ ಹುಡುಗಿ ಸಾಮಾನ್ಯ ಅಭ್ಯಾಸವನ್ನು ಪ್ರಾರಂಭಿಸಲು ನಿರಾಕರಿಸಿದಾಗ ತನ್ನನ್ನು ಪೀಡಿಸಬಹುದೆಂದು ಭಾವಿಸಿ ಅವಳು

ತನ್ನನ್ನೇ ತಾನು ಸುಟ್ಟುಕೊಂಡು ಸತ್ತುಹೋದಳು. ಅವಳು ಬಹು ಶಾಂತ ಮತ್ತು ನಿರ್ಧಾರದ ಮರಣವನ್ನಪ್ಪಿದಳು. ಅವಳು ಸಾದಾ ಎಣ್ಣೆ ದೀಪದಿಂದ ತನ್ನ ಸೀರೆಗೆ ಉರಿ ಹಚ್ಚಿಕೊಂಡಳು. ಅಂಥ ಉರಿಯಲ್ಲೂ ಅವಳು ಕೂಗಲಿಲ್ಲ. ನೆರೆಯ ಕೋಣೆಯವರಿಗೆ ಕೂಡ ಅವಳು ಪೂರ್ಣ ಸಾಯುವತನಕ ಇವಳು ಉರಿ ಹಚ್ಚಿಕೊಂಡದ್ದೇ ತಿಳಿಯಲಿಲ್ಲ. ನಾನು ಅವಳನ್ನು ಹೊಗಳಲು ಈ ಉದಾಹರಣೆಯನ್ನೀಯದೆ; ಹೆಂಗಳೆಯರು ಎಷ್ಟು ಬೇಗ ತಮ್ಮ ಜೀವನವನ್ನು ತೂರಿಬಿಡುವರೆಂದು ತೋರಿಸಲು ಕೊಟ್ಟಿದ್ದೇನೆ. ನಾನು ಕೂಡ ಇಂಥ ಕಾರ್ಯವನ್ನು ಮಾಡುವಷ್ಟು ಧೈರ್ಯ ತೋರಿಸಲು ಅಸಮರ್ಥನಿರುವೆ. ಇಲ್ಲಿ ಹೊರಗಿನ ಬೆಳಕಾಗದೆ, ಆಂತರಿಕ ಬೆಳಕೇ ಅವಶ್ಯವಿದೆಯೆಂದು ನಾನೊಪ್ಪುತ್ತೇನೆ" ಎಂದರು.

(ಹ. 1–9–1940)

* * *

"ಒಬ್ಬ ಸೈನಿಕ ಒಬ್ಬ ಹೆಣ್ಣು ಮಗಳ ಮೇಲೆ ಅತ್ಯಾಚಾರ ಮಾಡಿದರೆ ಅವಳು ತನ್ನ ಸದ್ಗುಣಗಳನ್ನೆಲ್ಲಾ ಕಳೆದುಕೊಂಡಳೆಂದು ಭಾವಿಸಬೇಕೆ? ಅಂಥವಳ ಮೇಲೆ ತಪ್ಪು ಹೊರಿಸಿ ಅವಳನ್ನು ಬಹಿಷ್ಕರಿಸಬೇಕೆ?" ಎಂದು ಗಾಂಧೀಜಿಗೆ ಪ್ರಶ್ನಿಸಿದರು.

ಹೆಣ್ಣು ಮಗಳು ಸದ್ಗುಣಗಳನ್ನು ಕಳೆದುಕೊಂಡಳೆಂದು ಹೇಳಿದಾಗ, ಅದರ ಹಾನಿಯಿಂದ ಶಿಕ್ಷಿಸಲಿಕ್ಕಾಗಲಿ ಅಥವಾ ಬಹಿಷ್ಕರಿಸಲಿಕ್ಕಾಗಿ ಅವಳು ಪಾತ್ರಳಾಗಲಾರಳು. ಅವಳಿಗೆ ಕ್ರೂರವಾದ ನೋವಾಗಿರುವುದರಿಂದ ನಮಗವಳ ಬಗ್ಗೆ ಸಹಾನುಭೂತಿ ಇರಲೇ ಬೇಕು. ಯಾರಿಗಾದರೂ ಅಪಘಾತವಾದರೆ ನಾವವರ ಶುಶ್ರೂಷೆ ಮಾಡುವಂತೆ; ಇವಳ ಘಾಯವನ್ನೂ ಶುಶ್ರೂಷಿಸಬೇಕು.

ಹೆಣ್ಣುಮಗಳು ತನ್ನ ಅಪಮಾನಕ್ಕೆ ಯಾವಾಗ ತಾನೇ ಒಪ್ಪಿಗೆಯನ್ನು ಕೊಡುತ್ತಾಳೋ ಆವಾಗ ಅವಳು ಶಿಕ್ಷೆಗೆ ಪಾತ್ರಳು. ವ್ಯಭಿಚಾರವು

ಮತ್ತು ಬಲತ್ಕಾರವು ಒಂದೇ ಇರುವುದಿಲ್ಲ. ನಾವು ಈ ಬೆಳಕಿನಲ್ಲಿ ಈ ವಿಷಯವನ್ನು ವಿಚಾರಿಸಬೇಕಿದ್ದರೆ, ಇಂಥ ವಿಷಯಗಳನ್ನು ಬಿಚ್ಚಿಡಬಾರದು. ಸಾರ್ವಜನಿಕರ ಅಭಿಪ್ರಾಯವನ್ನು ಇಂಥ ಹೆಣ್ಣುಮಕ್ಕಳೊಂದಿಗೆ ತೋರಿಸುವ ಗಂಡಸರ ನಡತೆಯ ವಿರುದ್ಧ ಹುಟ್ಟಿಸಬೇಕು.

ಪತ್ರಿಕೆಯವರು ಒಂದೇಸವನೇ ಚಳವಳಿಯನ್ನು ಹೂಡಿದರೆ, ಆ ಸೈನಿಕನು ಬಿಳಿಯನಿರಲಿ ಅಥವಾ ಕಂದುಬಣ್ಣದವನಿರಲಿ ಇಂಥ ಕಾರ್ಯವನ್ನೆಸಗಲು ಬಹುಶಃ ಕೈಹಾಕುವುದನ್ನು ಬಿಟ್ಟುಬಿಡಬಹುದು. ಅವರ ಮೇಲಿನಧಿಕಾರಿಗಳೂ ಕೂಡ ಇಂಥ ದುರ್ನಡತೆಗಳನ್ನು ಪ್ರತಿಬಂಧಿಸಲು ಉಗ್ರಕ್ರಮ ತೆಗೆದುಕೊಳ್ಳಲೇಬೇಕಾಗುವುದು.

(ಹ. 1–3–1942)

* * *

ಮಹಿಳೆಯರು ತಮ್ಮ ಪಾತಿವ್ರತ್ಯವನ್ನು ಹೇಗೆ ಉಳಿಸಿಕೊಳ್ಳಬೇಕೆಂಬ ಬಗ್ಗೆ ಕೆಲವೊಂದು ಸಲ ಕೇಳಲ್ಪಟ್ಟಿದೆ. ಇದಕ್ಕಾಗಿ ಅವರು ಕಠಾರಿಗಳನ್ನು ಇಟ್ಟುಕೊಳ್ಳಬೇಕೆಂಬ ಸೂಚನೆ ಬಂದಿದೆ. ಅವರು ಕಠಾರಿಗಳನ್ನೇ ಧರಿಸುವದಾದರೆ, ಅವುಗಳನ್ನು ಅವರ ಜನರಿಗೇನೇ ಉಪಯೋಗಿಸಬೇಕಾಗುವುದು. ಅಲ್ಲದೆ ಈ ಕಠಾರಿಯನ್ನು ಉಪಯೋಗಿಸಬೇಕಾದರೆ ಒಬ್ಬನು ಪಾಷಾಣ ಹೃದಯಿಯಾಗಬೇಕಾಗುವುದು. ಅವರು ತಮ್ಮ ಜೀವನದ ರೀತಿಯನ್ನೇ ಬದಲಿಸಬೇಕು. ಯಾಕೆಂದರೆ ಅವರು ರಕ್ತ ಬರುವುದನ್ನೇ ನೋಡಿರುವುದಿಲ್ಲ. ಯಾರ ರಕ್ತವನ್ನು ಸೆಳೆದಿರುವುದಿಲ್ಲ ಅಥವಾ ಕಠಾರಿಯನ್ನೇ ಹಿಡಿದು ಅವರಿಗೆ ಗೊತ್ತಿರುವುದಿಲ್ಲ. ನಾವು ಕಠಾರಿಯನ್ನು ಪ್ರಯೋಗಿಸಲು ಶಕ್ತರಾಗಬೇಕಾದರೆ, ಬೇಟೆಯನ್ನು ಕೈಕೊಳ್ಳಬೇಕಾಗುವುದು; ಅಸಂಖ್ಯಾತ ಕುರಿಗಳನ್ನು ಕೊಲ್ಲಬೇಕಾಗುವುದು. ಒಬ್ಬರ ಮೇಲೆ ಕಠಾರಿಯನ್ನು

ಎಸೆಯಬೇಕಾದರೆ ನಾವು ನಮ್ಮ ಹೃದಯವನ್ನು ಇಷ್ಟು ಕಲ್ಲನ್ನಾಗಿ ಮಾಡಿಕೊಳ್ಳಬೇಕಾಗುವುದು.

ಆದುದರಿಂದ ಹೆಣ್ಣು ಮಕ್ಕಳಿಗೆ ಕಠಾರಿಯನ್ನು ಉಪಯೋಗಿಸೆಂದು ಬೋಧಿಸುವ ಬದಲು ನಿರ್ಭೀತರಾಗಿ ಇರಲು ಹೇಳಬೇಕು. ದೇವರ ರಕ್ಷಣೆಯ ಹಸ್ತಗಳು ಸದಾ ನಮ್ಮ ಮೇಲೆ ಇದ್ದೇ ಇರುತ್ತವೆ. ನಾವು ದೇವರ ಅಸ್ತಿತ್ವದಲ್ಲಿ ನಂಬಿಕೆಯನ್ನಿಟ್ಟಾಗ ಯಾರಿಗೆ ಹೆದರಬೇಕು? ಕೆಟ್ಟ ಜನರು ನಿಮಗೆ ಅಪಮಾನ ಮಾಡಿದರೆ ನೀವು ರಾಮನಾಮವನ್ನು ತೆಗೆದುಕೊಳ್ಳಿರಿ. ದೇವರಿಗಾಗಿ ಮೊರೆಯಿಡುವ ಈ ಕೂಗಿನಿಂದ ಅನೇಕ ಕೆಟ್ಟ ಜನರು ಓಡಿ ಹೋಗುತ್ತಾರೆ. ಆದರೆ, ಆ ರೀತಿ ಆಗದಿದ್ದರೆ ಹಾನಿ ಏನಾದರೂ ಇದೆಯೇ? ಇಂಥ ಸಂದರ್ಭಗಳಲ್ಲಿ ನಾವು ಪ್ರಾಣತೆತ್ತುವುದನ್ನು ಕಲಿಯಬೇಕು. ಕೂಸು ಸಾವಿನ ಹಾಸಿಗೆಯಲ್ಲಿರುವಾಗ ಅದನ್ನು ನೋಡಿಕೊಳ್ಳುವಾಗ ನಮ್ಮನ್ನೇ ನಾವು ಮರಣಕ್ಕೆ ಗುರಿಮಾಡಿಕೊಳ್ಳುವುದಿಲ್ಲವೆ? ತಾಯಿಯ ಇಷ್ಟು ಪ್ರಯತ್ನದಿಂದಲೂ ಮಗು ತಾಯಿಯ ತೊಡೆಯಲ್ಲಿ ತೀರಿಕೊಂಡರೆ, ತಾಯಿಗೆ ತಾನು ತನ್ನ ಕರ್ತವ್ಯವನ್ನು ಮಾಡಿದೆನೆಂಬ ಸಮಾಧಾನವಿರುತ್ತದೆ. ಅಂತಲೇ ನಾವು, ಬೇಕಾದಾಗ ನಮ್ಮ ಪ್ರಾಣವನ್ನೇ ಅರ್ಪಿಸುವುದನ್ನು ಕರ್ತವ್ಯವನ್ನಾಗಿ ಮಾಡಿಕೊಳ್ಳಬೇಕು. ಪುರುಷನು ಎಷ್ಟೇ ಕೆಟ್ಟವನಿದ್ದರೂ, ಅವನ ಬಲೆಗೆ ಬೀಳದೆ ಮರಣವನ್ನಪ್ಪಿದರೆ ಅವನೇನು ಮಾಡಬಲ್ಲ? ಅವನು ಪರಿಶುದ್ಧ ಮನಸ್ಸಿನ ಮಾನವರನ್ನು ಎದುರಿಸಿದರೆ, ಒಂದು ಪಕ್ಷಕ್ಕೆ ತನ್ನ ಕೆಟ್ಟತನವನ್ನೇ ಬಿಟ್ಟುಬಿಡಬಹುದು. ಅಂಥ ಪರಿಶುದ್ಧ ಮನಸ್ಸಿನವರು ಸಾಯಲು ಸಿದ್ಧರಾಗಿಯೇ ಇರುತ್ತಾರೆ. ಸತ್ಯಾಗ್ರಹವು ಅದನ್ನು ಮಾಡಿದವರಿಗೂ ಮತ್ತು ಯಾರ ವಿರುದ್ಧ ಮಾಡುತ್ತಾರೋ ಅವರಿಗೂ ಪ್ರಯೋಜನವನ್ನು ಈ ರೀತಿ ಎರಡು ವಿಧಗಳಲ್ಲಿ ಕೊಡಬಲ್ಲದು.

(ಮಣಿ ಬೆಹನಳ ಪ್ರಾರ್ಥನಾ ಟಿಪ್ಪಣಿಗಳಿಂದ)



# ಅಣಿಮುತ್ತುಗಳು

ಗಡಿಗೆ ಕಿಟ್ಟಲೆಗಳ ವರ್ಣ ಒಂದೇ ಇರುವಾಗ, ಗಡಿಗೆ ಕಿಟ್ಟಲೆಗೆ 'ನೀನು ಕಪ್ಪು' ಎಂದು ಹೇಗೆ ಕರೆದೀತು? ಹಾಗೆಯೇ ಪುರುಷನು ಸ್ತ್ರೀಯರಿಗೆ ಏನೆನ್ನಬಹುದು? ಅಥವಾ ಅವರನ್ನು ಹೇಗೆ ಟೀಕಿಸಬಹುದು? ಅಸಂಖ್ಯಾತ ಸಂದೇಹ, ಶಂಕೆ, ವಿಕಾರ ಹಾಗು ಭೀತಿಗಳು ಸ್ತ್ರೀಯರಲ್ಲಿ ರೂಪಗೊಂಡಾಗ, ಪುರುಷನಲ್ಲಿ ಅವುಗಳ ಅಸ್ತಿತ್ವವೆಲ್ಲಾ ಇರಲೇಬೇಕು. ಕೆಲ ಪಂಡಿತರು ಸ್ತ್ರೀಯರಿಗೆ ಮುಕ್ತಿ ದೊರೆಯದೆಂದು ಹೇಳುತ್ತಾರೆ. ಆದರೆ, ನಾನು ನೋಡಿದಾಗ ನನಗೇನೂ ಹಾಗೆ ಕಂಡುಬರುವುದಿಲ್ಲ. ವೈಷ್ಣವರೆಲ್ಲರೂ ಮೀರಾಬಾಯಿಗಿಂತ ಹೆಚ್ಚಿನ ಭಕ್ತಾಗ್ರಣಿಯೇ ಇಲ್ಲವೆಂದು ಹೇಳುತ್ತಾರೆ. ಅಂದ ಮೇಲೆ, ಮೀರಾ ಬಾಯಿಗೆ ಮುಕ್ತಿ ದೊರೆಯದಿದ್ದರೆ, ಯಾವ ಪುರುಷನಿಗೂ ಮುಕ್ತಿಯೇ ದೊರೆಯದು.

* * *

ಸ್ತ್ರೀ–ಪುರುಷರಿಬ್ಬರೂ ನಿರ್ಭೀತಿಯಿಂದ ಇರಬಲ್ಲರು. ಪುರುಷನು ಭೀತಿಯಿಲ್ಲದೆ ಇರಬಹುದೆಂದು ಭಾವಿಸಬಹುದು; ಆದರೆ ಇದು ಸದಾಕಾಲವೂ ಸತ್ಯವಾಗಿಲ್ಲ. ಹಾಗೆಯೇ ಸ್ತ್ರೀಯರು ತಾವು ನಿರ್ಬಲರೆಂದು ಭಾವಿಸಿ ಅದರಂತೆಯೇ ಕರೆಸಿಕೊಳ್ಳಲ್ಪಡಬಹುದು; ಆದರೆ ಅವರು ಹಾಗೆ ಇಲ್ಲ. ಸ್ತ್ರೀಯರಿಗೆ ಅಂಜಿಕೆಯು ಇರಬೇಕಾದ ಅವಶ್ಯಕತೆಯೇ ಇಲ್ಲ. ಮೊನ್ನೆ ನಾನು ಮೀರಾಬಾಯಿಯ ಬಗ್ಗೆ ಕೇಳಿದ್ದನ್ನು ಹೇಳುತ್ತೇನೆ. ಮೀರಾಬಾಯಿ ವೃಂದಾವನಕ್ಕೆ ಹೋಗಿ

ಸಾಧುವಿನ ಬಾಗಿಲವನ್ನು ಬಡೆದಳಂತೆ, ಸಾಧುವು ಒಳಗಿನಿಂದಲೇ, "ತಾನು ಯಾವ ಹೆಣ್ಣು ಮಕ್ಕಳನ್ನೂ ನೋಡಿಲ್ಲವೆಂದೂ, ಮತ್ತು ನೋಡಬಯಸುವುದಿಲ್ಲವೆಂದೂ" ಉತ್ತರವನ್ನಿತ್ತಂತೆ. ಕೂಡಲೇ ಮೀರಾಬಾಯಿ, "ನೀನಾರು? ನನಗೆ ಗೊತ್ತಿರುವವನು ಶ್ರೀಕೃಷ್ಣನೊಬ್ಬನೆ" ಎಂದಳಂತೆ.

ಇದನ್ನು ಕೇಳಿದ ಕೂಡಲೇ ಸಾಧುವು ಬಾಗಿಲನ್ನು ತೆರೆದು ಮೀರಾಬಾಯಿಯ ಕಾಲಿಗೆ ಬಿದ್ದು "ನೀವಿಂದು ನನ್ನ ಕಣ್ಣನ್ನು ತೆರೆಸಿದಿರಿ. ರಸಾತಲದಿಂದ ನನ್ನನ್ನು ಎತ್ತಿ ಹಿಡಿದಿರಿ" ಎಂದು ಹೇಳಿದನಂತೆ.

* * *

ಮಕ್ಕಳ ಶಿಕ್ಷಣವು ಪೂರ್ಣವಾಗಿ ತಾಯಂದಿರ ಮೇಲೆಯೇ ಅವಲಂಬಿಸಿರುತ್ತದೆ. ನಾನು ಆಶ್ರಮಗಳಲ್ಲಿ ಮಕ್ಕಳ ಶಿಕ್ಷಣಕ್ಕಾಗಿ ಎಷ್ಟೇ ಪ್ರಯತ್ನಿಸಿದರೂ, ತಾಯಂದಿರ ಸಹಕಾರವು ದೊರೆಯದೇ ಹೋದರೆ, ನನ್ನ ಶ್ರಮವೆಲ್ಲಾ ಫಲರಹಿತವಾಗುತ್ತದೆ. ನಾವು ಮತ್ತೊಬ್ಬರಿಗೆ ಸಹಾಯವಾಗುವಂಥ ಶಿಕ್ಷಣವನ್ನು ಮಕ್ಕಳಿಗೆ ಕೊಡಬೇಕು. ಮಗು ಮಾಸ್ತರರ ಬಳಿಯಲ್ಲಿ ಅಭ್ಯಾಸಕ್ಕೆ ಹೋದರೂ, ತಾಯಿಯ ಸ್ನೇಹ ಹೃದಯದ ಸೂತ್ರವನ್ನು ಹಿಡಿದುಕೊಂಡೇ ಹೋಗಿರುತ್ತದೆ. ಅವನು ಅಲ್ಲಿ ತಾನು ಯಾವಾಗ ಮರಳಿ ತಾಯಿಯ ಕಡೆ ಹೋದೇನೋ ಎಂದು ಚಿಂತಿಸುತ್ತಿರುತ್ತಾನೆ. ತಾಯಿ ಈ ಸ್ನೇಹಸೂತ್ರದಿಂದ ಮಗುವನ್ನು ಸೆಳೆದುಕೊಳ್ಳುತ್ತಾಳೆ.

* * *

ಒಬ್ಬ ಹುಡುಗಿ ಅವಿವಾಹಿತಳಾಗಿಯೇ ಇರಬಯಸಿದರೆ, ಅವಳನ್ನು ಸ್ವತಂತ್ರತೆಯ ಜೊತೆ ಮದುವೆ ಮಾಡಬೇಕು. ಯಾರ ಮೇಲಾದರೂ ಅವಲಂಬಿಸಿರುವ ಹುಡುಗಿ ಎಂದಿಗೂ ಅವಿವಾಹಿತಳಾಗಿ ಉಳಿಯಲಾರಳು.

* * *

ಯಾವ ಜ್ಞಾನದಲ್ಲಿ ನಮ್ರತೆಯಾಗಲಿ ಅಥವಾ ಕೋಮಲತೆಯಾಗಲಿ ಇರುವುದಿಲ್ಲವೋ ಅಂಥ ಜ್ಞಾನದಿಂದ ಆಗುವ ಪ್ರಯೋಜನವಾದರೂ ಏನು? ಒಂದು ಪಕ್ಷಿ ತನ್ನ ಮೇಲೆ ಮಲವನ್ನು ಕೆಡವಿತೆಂದು ಕೌಶಿಕ ಋಷಿ ಬ್ರಹ್ಮಾಂಡದಷ್ಟು ಕೋಪಗೊಂಡನು. ಅವನ ಆ ಕೋಪದ ತಾಪಕ್ಕೆ ಸಿಕ್ಕು ಪಕ್ಷಿಯು ಬೂದಿಯಾಯಿತು. ಆ ಮುನಿಗೆ ತನ್ನ ತಪಸ್ಸಿನ ಪ್ರಭಾವದಿಂದ ಪಕ್ಷಿ ಕೂಡ ಬೂದಿಯಾಯಿತಲ್ಲ ಎಂದು ಅಭಿಮಾನವೆನಿಸಿತು. ಮುಂದೆ ಅವನು ಅತಿಥಿಗಳೊಬ್ಬರ ಮನೆಗೆ ನಡೆದು ಹೋದನು. ಆದರೆ ಆ ಮನೆಯ ಯಜಮಾನಿ ತನ್ನ ಪತಿಗೆ ಊಟಕ್ಕೆ ಬಡಿಸಹತ್ತಿದ್ದರಿಂದ ಕೌಶಿಕರನ್ನು ಕಾಯಿಸಬೇಕಾಯಿತು. ಪತಿಗೆ ಊಟಕ್ಕೆ ಬಡಿಸುವುದನ್ನು ಮುಗಿಸಿದ ತತ್‌ಕ್ಷಣವೇ, ಇವಳು ಅವರಿಗೂ ಆಹಾರವನ್ನು ತೆಗೆದುಕೊಂಡು ಹೋಗಿ ತಾನು ಪತಿಗೆ ಬಡಿಸ ಹತ್ತಿದ್ದರಿಂದ ಕಾಯಿಸಬೇಕಾಯಿತೆಂದೂ ಮತ್ತು ಅದಕ್ಕಾಗಿ ಕ್ಷಮಿಸಬೇಕೆಂದೂ ಬೇಡಿಕೊಂಡಳು. ಕೂಡಲೇ ಋಷಿ ಅವಳ ಮೇಲೆ ಸಿಟ್ಟಿಗೆದ್ದನು. ಆ ಯಜಮಾನಿಯು "ಆರ್ಯರೆ, ಬೂದಿಯಾಗಲು ನಾನೇನು ಆ ಪಕ್ಷಿಯಲ್ಲ. ಅಲ್ಲದೆ ಇಂಥ ಕೋಪವನ್ನಿಟ್ಟುಕೊಂಡ ಪಾಂಡಿತ್ಯದಿಂದ ಏನೂ ಆಗದು" ಎಂದುಬಿಟ್ಟಳು. ಆ ಮುನಿಗಳು ಅವಳಿಂದ ಪಾಠವನ್ನು ಕಲಿಯುತ್ತ "ನೀನಿಂದು ನನಗೆ ದ್ವಿವಿಧದ ಆಹಾರವನ್ನು ಕೊಟ್ಟಿರುವಿ. ಒಂದು ಹೊಟ್ಟೆಗೆ; ಇನ್ನೊಂದು ಬುದ್ಧಿಗೆ" ಎಂದುಬಿಟ್ಟರು.

* * *

ಆತ್ಮವೇ ಆತ್ಮವನ್ನು ಉದ್ಧರಿಸಬಲ್ಲದು; ಆತ್ಮಕ್ಕೆ ಆತ್ಮವೇ ಸಹಾಯ ಮಾಡಬಲ್ಲದು. ಕೇವಲ ಮಹಿಳೆಯರೇ ಮಹಿಳೆಯರನ್ನು ಮೇಲಕ್ಕೆತ್ತಬಲ್ಲರು. ಇದಕ್ಕೆ ತ್ಯಾಗ ಬೇಕು; ದುಡಿಮೆ ಬೇಕು. ಸ್ತ್ರೀಯರು ಪುರುಷರಿಗಿಂತಲೂ ತ್ಯಾಗದಲ್ಲಿ ಮುಂದಿರುವರು; ಆದರೆ ಈ ತ್ಯಾಗವು ಬುದ್ಧಿವಂತಿಕೆಯಿಂದ ಕೂಡಿರಬೇಕು. ಶ್ರಮಜೀವಿಗಳಂತೆ ನಿಸ್ಸಹಾಯಕ ಸ್ಥಿತಿಯಲ್ಲಿ ಸ್ತ್ರೀ ಇಂದು ದುಡಿಯಹತ್ತಿದ್ದಾಳೆ.

ಸ್ತ್ರೀಯನ್ನು ಸ್ತ್ರೀಯೇ ಉದ್ಧರಿಸಬಲ್ಲಳೆಂದು ಎಲ್ಲರೂ ಒಪ್ಪಿದ್ದಾರೆ?" ಎಂದು ಯಾರಾದರೂ ಕೇಳಬಹುದು. ಅವಳು ನಿಲ್ಲಬಲ್ಲಳೆಂದು ನನ್ನ ಹೃದಯ ಹೇಳುತ್ತಿದೆ. ಅವಳು ಸತ್ಯಾಗ್ರಹವನ್ನು ಅರಿತರೆ, ಅವಳು ಸ್ವತಂತ್ರವಾಗಿ ನಿಲ್ಲಬಲ್ಲಳಲ್ಲದೆ, ತನ್ನನ್ನು ತಾನೇ ಪೋಷಿಸಿಕೊಳ್ಳಬಲ್ಲಳು. ಅವಳು ಯಾರ ಮೇಲೆಯೂ ಅವಲಂಬಿಸಿಲ್ಲವೆಂದು ತಿಳಿದುಕೊಳ್ಳಬಹುದು. ಇದರರ್ಥ, ಅವಳು ಯಾರಿಂದಲೂ ಸಹಾಯವನ್ನು ಅಪೇಕ್ಷಿಸಲಾರಳೆಂದಲ್ಲ. ಅವಳು ಅಪೇಕ್ಷಿಸಲೇಬೇಕು. ಆದರೆ ಅಂಥ ಸಹಾಯ ಅವಳಿಗೆ ದೊರೆಯದೇ ಹೋದರೆ ಅವಳೇನು ನಿರ್ಗತಿಕಳಾಗುವುದಿಲ್ಲ. ನಮಗೆ ಬರುತ್ತಿರುವ ಪದಾರ್ಥಗಳು ಬಾರದೇ ಹೋದರೂ ನಾವು ಸ್ವಾವಲಂಬಿಗಳಾಗಿಯೇ ಇರುತ್ತೇವೆ. ಅಂಥ ಸ್ಥಿತಿಯಲ್ಲಿ ನಾವು ಜಗತ್ತಿನಿಂದಲೇ ಸಹಾಯವನ್ನೂ ಸ್ವೀಕರಿಸಿದರೂ ಯಾರ ಮೇಲೆಯೂ ಅವಲಂಬಿತವಾಗಿ ಗೆಲ್ಲುವುದಿಲ್ಲ. ನಮಗೆ ಸಹಾಯವು ದೊರೆಯದೇ ಹೋದರೆ, ಸಹಾಯವು ಸಿಗಲಿಲ್ಲ, ಒಳ್ಳೆಯದಾಯಿತು ಎಂದನ್ನುತ್ತ ನಾವೇನು ಅವರ ಮೇಲೆ ಸಿಟ್ಟಿಗೇಳುವುದಿಲ್ಲ. ಅಥವಾ ಅವರನ್ನು ದೋಷಾರೋಪಣೆಗೆ ಗುರಿಮಾಡುವುದಿಲ್ಲ. ಇದನ್ನು ಸತ್ಯಾಗ್ರಹವೆಂದು ಕರೆಯುತ್ತಾರೆ. ನಾವು ನಿರ್ಭೀತರಿರುವೆವೆಂದು ತಿಳಿದುಕೊಂಡರೆ ಸಾಲದು. ನಮ್ಮ ಹೃದಯದಿಂದ ಈ ಭೀತಿಯನ್ನು ನಾವು ಹೊಡೆದೋಡಿಸಬೇಕು. ಭೀತಿಯನ್ನು ತೆಗೆದುಹಾಕುವುದರಿಂದ ನಾವು ವಿಶ್ವದೊಡನೆ ಉದಾಸೀನರಾಗಿ ಇರಬೇಕೆಂದಲ್ಲ.

ತಾವು ನಿಸ್ಸಹಾಯಕರಿರುವರೆಂಬ ವಿಚಾರವನ್ನು ಎಲ್ಲರೂ ಬಿಟ್ಟುಬಿಡಬೇಕು. ದೇವರೇ ಎಲ್ಲರಿಗೂ ಸಹಾಯ ಮಾಡುವವನು. ಸದ್ಯಕ್ಕೆ ಮಹಿಳೆಯರ ಚಿಂತಾಜನಕ ಪರಿಸ್ಥಿತಿಗೆ ಕಾರಣವನ್ನು ಅವರ ಗಂಡಂದಿರ ಮೇಲೆ ಹೊರಿಸಬಹುದು. ಆದರೆ ಅವರು ತಮ್ಮ ನಿರ್ಬಲತೆಯನ್ನು ಹೇಗೆ ಬಿಸುಟಬಹುದೆಂದು ಅವರೇ ವಿಚಾರಿಸಬಹುದು.

ತುಲಸೀದಾಸರಂಥವರು ಕೂಡ, ಹೆಣ್ಣುಮಕ್ಕಳ ಬಗ್ಗೆ ಅಗೌರವವಾದ ರೀತಿಯಲ್ಲಿ ಮಾತನಾಡುವಂಥ ಅಪರಾಧವನ್ನೇನು ಅವರು ಮಾಡಿದ್ದಾರೆ? ತಪ್ಪು ತುಲಸೀದಾಸರದೇ ಇರಲಿ, ಅಥವಾ ಆ ಕಾಲದ್ದಿರಲಿ, ತಪ್ಪು ಮಾತ್ರ ಇದೆ. ಪ್ರಾಚೀನ ಶಾಸನಗಳನ್ನೆಲ್ಲಾ ಪುರುಷರೇ ಮಾಡಿದ್ದಾರೆ. ಅವರು ಋಷಿಗಳಾಗಲಿ ಅಥವಾ ಸಿದ್ಧಪುರುಷರಾಗಲಿ ಇದ್ದರೂ ಕೂಡ ಸ್ತ್ರೀಯರ ಬಗ್ಗೆ ಅಷ್ಟು ಜ್ಞಾನವನ್ನು ಪ್ರದರ್ಶಿಸಿಲ್ಲ. ನಿಜವಾಗಿಯೂ ಹೇಳಬೇಕಾದರೆ, ಸ್ತ್ರೀ ಪುರುಷಬ್ಬರಲ್ಲಿಯೂ ಯಾರು ಹೆಚ್ಚು ಕಡಿಮೆಯೆಂದು ತಿಳಿದುಕೊಳ್ಳಬಾರದು. ಅವರವರ ಸ್ಥಾನವಾಗಲಿ ಅಥವಾ ಕರ್ಮಗಳಾಗಲೀ ಬೇರೆ ಬೇರೆ ಇವೆ. ದೇವರು ಅವರಿಬ್ಬರಿಗೂ ಅವರವರ ಅಸಹಾಯಕತೆಯನ್ನು ಗೊತ್ತುಪಡಿಸಿಕೊಟ್ಟಿದ್ದಾನೆ.

ವಿಚಾರವಿಲ್ಲದಲೇ ಯಾವ ಕಾರ್ಯವನ್ನು ನನ್ನ ಆಶ್ರಮದ ಹೆಣ್ಣು ಮಕ್ಕಳು ಮಾಡಬಾರದೆಂದು ನಾನಾಶಿಸುತ್ತೇನೆ. ಇದನ್ನು ಅರಿತುಕೊಳ್ಳಬೇಕಾದರೆ ಅವರು ಜ್ಞಾನವನ್ನು ಸಂಪಾದಿಸಬೇಕಾಗುವುದು. ಸದ್ಯಕ್ಕೆ ಭಾರತೀಯ ಹೆಣ್ಣುಮಕ್ಕಳು ನಿಸ್ತೇಜ ಮತ್ತು ನಿರ್ಜೀವರಾಗಿದ್ದಾರೆ.

(ಮಣಿಬೆಹನಳ ಪ್ರಾರ್ಥನಾ ಟಿಪ್ಪಣಿಗಳಿಂದ)

* * *

ನಮ್ಮ ಸಾಹಿತ್ಯದಲ್ಲಿ ಸ್ತ್ರೀಯರನ್ನು ಅತಿಯಾಗಿ ಆರಾಧಿಸುವರೆಂದು ನನ್ನನ್ನು ಕೆಲವರು ಕೇಳಿದ್ದಾರೆ. ಇಂಥ ಆರಾಧನೆ 'ತಪ್ಪು' ಎಂದು ನಾನು ಹೇಳುತ್ತೇನೆ. ನಮ್ಮೆದುರು ಒಂದು ಸಾಮಾನ್ಯ ಪರೀಕ್ಷೆಯನ್ನು ಇಡಲು ನನಗೆ ಅವಕಾಶ ಕೊಡಿರಿ. ಮಹಿಳೆಯರ ಬಗ್ಗೆ ಬರೆಯಲು ನೀವು ಪ್ರಾರಂಭಿಸಿದಾಗ, ಅವರೆಂದರೆ ಏನೆಂದು ತಿಳಿದುಕೊಳ್ಳುತ್ತೀರಿ? ನೀವು ಕಾಗದಕ್ಕೆ ಲೆಕ್ಕಣಿಕೆಯನ್ನು ಹಚ್ಚುವ ಪೂರ್ವದಲ್ಲಿ ಅವರನ್ನೆಲ್ಲಾ

ನಿಮ್ಮ ತಾಯಂದಿರೆಂದೇ ಭಾವಿಸಿರಿ. ಅಂದರೆ, ಸ್ವರ್ಗದಿಂದ ಸುರಿದು ತಳಗಿನ ನೆಲವನ್ನೆಲ್ಲಾ ತೋಯಿಸುವ ಸುಂದರವಾದ ಮಳೆಯಂತೆ ನಿಮ್ಮ ಸಾಹಿತ್ಯದ ಧಾರೆಯೂ ಪವಿತ್ರವಾಗಬಲ್ಲದೆಂದು ನಾನು ಭರವಸೆಯನ್ನು ನೀಡಬಲ್ಲೆ. ಸ್ತ್ರೀ ನಿಮ್ಮ ಹೆಂಡತಿಯಾಗುವುದಕ್ಕಿಂತ ಮೊದಲೇ ನಿಮ್ಮ ತಾಯಿಯಾಗಿದ್ದಾಳೆಂದು ನೆನಪಿನಲ್ಲಿಡಿರಿ. ಹೆಣ್ಣುಮಕ್ಕಳಿಗೆ ಕಾದಂಬರಿಗಳಲ್ಲಿ ಬರುವ ತಮ್ಮ ವರ್ಣನೆಗೆ ಹೇಗೆ ಉತ್ತರವನ್ನೀಯಬೇಕೆಂದು ಆಶ್ಚರ್ಯಪಡುವಲ್ಲಿಯೇ ಸಮಯವನ್ನು ವ್ಯಯಿಸುವಷ್ಟು ಕೆಲ ಲೇಖಕರು ತಮ್ಮ ಆಧ್ಯಾತ್ಮಿಕ ನೀರಡಿಕೆಯನ್ನು ಹಿಂಗಿಸಿಕೊಳ್ಳುವುದರ ಬದಲು ವಿಕಾರಗಳು ಉದ್ರೇಕಗೊಳ್ಳುವಂತೆ ಬರೆಯುತ್ತಾರೆ. ಸ್ತ್ರೀಯರ ಅಂಗಾಂಗಗಳನ್ನೆಲ್ಲಾ ವರ್ಣಿಸುವುದು ಸಾಹಿತ್ಯದ ಒಂದು ಮುಖ್ಯ ಉದ್ದೇಶವಾಗಿದೆಯೇ? ನೀವು ಇಂಥದನ್ನು ಉಪನಿಷತ್ತಿನಲ್ಲಾಗಲಿ ಕುರಾನ್‌ದಲ್ಲಾಗಲಿ ಅಥವಾ ಬೈಬಲ್ಲಿನಲ್ಲಾಗಲಿ ನೋಡಬಲ್ಲಿರಾ? ಆದಾಗ್ಯೂ ಬೈಬಲ್ ಇಲ್ಲದಲೇ ಇಂಗ್ಲೀಷ ಭಾಷೆ ಬಂಜೆಯೆಂಬುದನ್ನು ನೀವು ತಿಳಿದಿಲ್ಲವೆ? ಆ ಭಾಷೆಗೆ ಶೇಕ್ಸಪಿಯರ್ ಒಂದು ಪಾಲು ಸೌಂದರ್ಯವನ್ನು ತಂದರೆ, ಬೈಬಲ್ ಮೂರು ಪಾಲು ಸೌಂದರ್ಯವನ್ನು ತರಬಲ್ಲದು. ಕುರಾಣವಿರದಿದ್ದರೆ ಅರಬ್ಬೀ ಭಾಷೆ ಎಂದೋ ಮರೆತುಹೋಗುತ್ತಿತ್ತು. ಹಾಗೆಯೇ ತುಳಸೀದಾಸರ ಕೃತಿಗಳಿಲ್ಲದೆ ಹಿಂದೀ ಸಾಹಿತ್ಯವು ಹೇಗಾಗಬಲ್ಲದೆಂಬುದನ್ನು ನೀವು ಊಹಿಸಿರಿ. ಆಧುನಿಕ ಸಾಹಿತ್ಯದಲ್ಲಿ ಬರುವ ಸ್ತ್ರೀಯರ ವರ್ಣನೆಯನ್ನು ನಿಮ್ಮಲ್ಲಿ ಕಾಣಬಹುದೆ?

(ಹ. 21–11–1936)

* * *

ಹೆಣ್ಣು ಮಕ್ಕಳಿಗೆ ಯೋಗ್ಯವಾದ ಶಿಕ್ಷಣವು ದೊರೆಯಬೇಕೆಂದು ನಂಬುವವರಲ್ಲಿ ನಾನೊಬ್ಬ. ಸ್ತ್ರೀಯು ಪುರುಷನನ್ನು ಹಾಸ್ಯಮಾಡುವುದರಿಂದಾಗಲಿ ಅಥವಾ ಪುರುಷನೊಡನೆ

ಸ್ಪರ್ಧಿಸುವುದರಿಂದಾಗಲಿ ಯಾವ ಕಾಣಿಕೆಯನ್ನು ಕೊಡಲಾರಳೆಂದು ನಾನು ಭಾವಿಸುತ್ತೇನೆ. ಅವಳು ಪುರುಷನೊಡನೆ ಸ್ಪರ್ಧಿಸಬಹುದು; ಆದರೆ ಅವಳು ಹಾಸ್ಯಮಾಡುವಲ್ಲಿ ಎಷ್ಟು ಎತ್ತರಕ್ಕೆ ಹೋಗುವಳೋ ಅಷ್ಟೆತ್ತರವನ್ನು ಸ್ಪರ್ಧೆಯಲ್ಲಿ ಪಡೆಯಲಾರಳು ಅವಳು ಪುರುಷನ ಪೂರಕವಾಗಿಯೇ ಉಳಿಯುವಳು.

(ಹ. 27–2–1937)

* * *

ಪುರುಷನು ಸ್ತ್ರೀಯನ್ನು ತನ್ನ ಮನೆಗೆಲಸ ಮಾಡುವ ತೊತ್ತೆಂದು ಮತ್ತು ವಿಲಾಸದ ವಸ್ತುವೆಂದೂ ಭಾವಿಸಿದ್ದಾನೆ, ವಿನಾ ಅವಳು ತನ್ನ ಅರ್ಧಾಂಗಿ ಮತ್ತು ಸಹಚಾರಿಣಿಯೆಂದು ಭಾವಿಸಿಲ್ಲ. ಇದರಿಂದ ಸಮಾಜದ ಅರ್ಧಭಾಗಕ್ಕೇ ಪಕ್ಷಪಾತದಂತಾಗಿದೆ. ಸ್ತ್ರೀಯನ್ನು ಮಾನವಕುಲದ ಮಾತೆಯೆಂದು ಕರೆಯುವುದು ಸರಿಯಾಗಿದೆ. ....ನಾವು ಮಾಡಿದ ಮಹದನ್ಯಾಯವನ್ನು ....ಋಣಭಾರವನ್ನು ಹೊರಬೇಕು.

○

# ಗಾಂಧೀಜಿ ಅವರ ಜೀವನ ಘಟನಾವಳಿಗಳು

| | |
|---|---|
| ಪೋರಬಂದರದಲ್ಲಿ ಜನನ | ದಿ.02.10.1869 |
| ಕಸ್ತೂರ್‌ಬಾರೊಂದಿಗೆ ವಿವಾಹ | 1881 |
| ಮೆಟ್ರಿಕ್ಯುಲೇಶನ್ ಉತ್ತೀರ್ಣರಾದದ್ದು | 1887 |
| ಶಿಕ್ಷಣಕ್ಕಾಗಿ ಇಂಗ್ಲೆಂಡಿಗೆ ಪ್ರಯಾಣ | 1888 |
| ಬ್ಯಾರಿಸ್ಟರರಾಗಿ ದಾಖಲಾತಿ | 1891 |
| ಮರಳಿ ಭಾರತಕ್ಕೆ | 1891 |
| ದಕ್ಷಿಣ ಆಫ್ರಿಕಾಕ್ಕೆ ಹಡಗಿನಲ್ಲಿ ಪ್ರಯಾಣ | 1893 |
| ಭಾರತ ಸಂದರ್ಶನ | 1896 ಮತ್ತು 1901 |
| ಬೋರ್ ಯುದ್ಧ ಮತ್ತು ಜೂಲು ದಂಗೆಯಲ್ಲಿ ಇಂಡಿಯನ್ ಅಂಬುಲೆನ್ಸ್ ಕೋರ್ ನೇತೃತ್ವ | 1899 ಮತ್ತು 1906 |
| ಭಾರತ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದಲ್ಲಿ ಪಾಲ್ಗೊಂಡಿದ್ದು | 1901 |
| ಇಂಡಿಯನ್ ಒಪಿನಿಯನ್ ಪತ್ರಿಕೆಯ ಪ್ರಾರಂಭ | 1903 |
| ಫೀನಿಕ್ಸ್ ಆಶ್ರಮ ಸ್ಥಾಪನೆ | 1904 |
| ಬ್ರಹ್ಮಚರ್ಯ ವ್ರತ ಸ್ವೀಕಾರ | 1906 |
| ಇಂಗ್ಲೆಂಡಿಗೆ ಪ್ರಯಾಣ | 1906 ಮತ್ತು 1909 |
| ದಕ್ಷಿಣ ಆಫ್ರಿಕಾದಲ್ಲಿ ಪ್ರಥಮ ಜೈಲುವಾಸ | 1908 |
| ಟಾಲ್‌ಸ್ಟಾಯ್ ಆಶ್ರಮ ಸ್ಥಾಪನೆ | 1910 |
| ದಕ್ಷಿಣ ಆಫ್ರಿಕಾದಲ್ಲಿ ಚಾರಿತ್ರಿಕ ಸತ್ಯಾಗ್ರಹ ಆರಂಭ | 1913 |
| ಭಾರತಕ್ಕೆ ಆಗಮನ | 1915 |

| | |
|---|---|
| ಸಬರಮತಿ ಆಶ್ರಮ ಸ್ಥಾಪನೆ | 1915 |
| ಖೇಡಾದಲ್ಲಿ ಕರನಿರಾಕರಣೆ ಚಳುವಳಿ | 1918 |
| ಜಲಿಯನ್ ವಾಲಾಬಾಗ್ ಹತ್ಯಾಕಾಂಡ | 1919 |
| ಯಂಗ್ ಇಂಡಿಯಾ, ನವಜೀವನ ಪತ್ರಿಕೆಗಳ ಆರಂಭ | 1919 |
| ಅಸಹಕಾರ ಆಂದೋಲನ | 1921 |
| ಭಾರತದಲ್ಲಿ ಪ್ರಥಮ ಜೈಲುವಾಸ | 1922 |
| ಖಾದಿ ಪ್ರವಾಸ | 1927 |
| ಉಪ್ಪಿನ ಸತ್ಯಾಗ್ರಹ ಮತ್ತು ದಾಂಡೀಯಾತ್ರೆ | 1930 |
| ಯೂರೋಪು ಸಂದರ್ಶನ ಮತ್ತು ದುಂಡು ಮೇಜಿನ ಪರಿಷತ್ತು | 1931 |
| ಸೇವಾಗ್ರಾಮ ಆಶ್ರಮ ಸ್ಥಾಪನೆ | 1933 |
| ಹರಿಜನ ಯಾತ್ರೆ | 1933 |
| ಹರಿಜನ ಸಾಪ್ತಾಹಿಕ ಪ್ರಾರಂಭ | 1933 |
| ನಯೀ ತಾಲೀಂ ಶಿಕ್ಷಣ ಪದ್ಧತಿ ಪ್ರಾರಂಭ | 1937 |
| "ಭಾರತ ಬಿಟ್ಟು ತೊಲಗಿ" ಚಳುವಳಿ | 1942 |
| ಕೊನೆಯ ಬಾರಿಗೆ ಆಗಾಖಾನ್ ಅರಮನೆಯಲ್ಲಿ ಸೆರೆವಾಸ | 1942–44 |
| ಹಂತಕನ ಗುಂಡೇಟಿಗೆ ಬಲಿ | 30–1–1948 |

# ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಪ್ರಕಟಣೆಗಳು

| | | |
|---|---|---|
| 1. | ಆರೋಗ್ಯ ರಹಸ್ಯ | 10–00 |
| 2. | ಕರ್ನಾಟಕದಲ್ಲಿ ಗಾಂಧೀ | 5–00 |
| 3. | ರಾಮನಾಮ | 6–00 |
| 4. | ಗಾಂಧೀ ಬಳಗದ ವಿದೇಶಿಯರು | 40–00 |
| 5. | ಆರೋಗ್ಯ | 8–00 |
| 6. | ಪ್ರಾರ್ಥನೆ | 8–00 |
| 7. | ಸತ್ಯಾಗ್ರಹ | 8–00 |
| 8. | ಮಹಿಳೆಯರಿಗಾಗಿ | 8–00 |
| 9. | ಪಂಚಾಯತ್ ರಾಜ್ | 12–00 |
| 10. | ಆದರ್ಶಗಳು | 12–00 |
| 11. | ನಮ್ಮ ಗಾಂಧೀ ತಾತ | 25–00 |
| 12. | ದೇವನಗರಿಯಲ್ಲಿ ಗಾಂಧೀ ಧ್ವನಿ | 2–00 |
| 13. | ನಮ್ಮ ಗಾಂಧೀ ತಾತ | 15–00 |
| 14. | ಹೋರಾಟ ಶ್ರೀ | 40–00 |
| 15. | ಮಹಾತ್ಮ ಗಾಂಧೀಜಿ ಅವರ ಜೀವನ ಮೈಲಿಗಲ್ಲುಗಳು | 3–00 |
| 16. | ಗಾಂಧೀಜಿ ಜೀವನ ಚರಿತ್ರೆ | 25–00 |
| 17. | ಕುವೆಂಪು ಕಂಡ ಗಾಂಧೀ | 25–00 |
| 18. | ಉಪ್ಪಿನ ಸತ್ಯಾಗ್ರಹ | 5–00 |
| 19. | ಹಿಂದ್ ಸ್ವರಾಜ್ | 50–00 |
| 20. | ಗಾಂಧೀ ಮತ್ತು ಆಧ್ಯಾತ್ಮಿಕ ಜೀವನ | 25–00 |
| 21. | ನನ್ನ ಕನಸಿನ ಭಾರತ | 30–00 |
| 22. | ಹಿಂದೂ ಧರ್ಮ | 25–00 |
| 23. | ಮಹಿಳೆಯರು | 30–00 |
| 24. | ಸ್ವಾತಂತ್ರ್ಯ | 25–00 |
| 25. | ಅಸ್ಪೃಶ್ಯತೆ | 30–00 |
| 26. | ಒಳ್ಳೆಯ ಜೀವನ | 25–00 |

| | | |
|---|---|---|
| 27. | ಪ್ರಾರ್ಥನೆ | 25–00 |
| 28. | ಗಾಂಧೀ ಮತ್ತು ಕರ್ನಾಟಕ | 200–00 |
| 29. | ಸತ್ಯ | 30–00 |
| 30. | ವಿದ್ಯಾರ್ಥಿಗಳಿಗಾಗಿ | 30–00 |
| 31. | ಸರ್ವೋದಯ | 30–00 |
| 32. | ಖಾದಿ ಗ್ರಾಮೋದ್ಯೋಗ | 30–00 |
| 33. | ನನ್ನ ಬಾಲ್ಯದ ನೆನಪುಗಳು | 30–00 |
| 34. | ಗ್ರಾಮರಾಜ್ಯ ಆಡಳಿತ | 5–00 |
| 35. | ನನ್ನ ಕನಸಿನ ಸ್ವರಾಜ್ಯ | 5–00 |
| 36. | ಗಾಂಧೀ ಮತ್ತು ಹಾಸ್ಯ | 20–00 |
| 37. | ನನ್ನ ಆದರ್ಶಗ್ರಾಮ | 5–00 |
| 38. | ಮಹಾತ್ಮ ಗಾಂಧೀ ವಿಚಾರಗಳು ಹಾಗೂ ವ್ಯವಸ್ಥಾಪನ ಪದ್ಧತಿ | 48–00 |
| 39. | ಸತ್ಯಾಗ್ರಹಿ | 40–00 |
| 40. | ಗ್ರಾಮದಾನ ಗ್ರಾಮ ಸ್ವರಾಜ್ಯ | 25–00 |
| 41. | ಗಾಂಧೀಜಿಯವರ ಪ್ರಾತ: ಸಾಯಂ ಪ್ರಾರ್ಥನೆ ಮತ್ತು ಭಜನೆ | |
| 42. | ಉಪ್ಪಿನ ಸತ್ಯಾಗ್ರಹ ಮತ್ತು ಮೈಲಾರ ಮಹಾದೇವ | 5–00 |
| 43. | ಸತ್ಯಾಗ್ರಹ | 5–00 |
| 44. | ಹಿಂದ್ ಸ್ವರಾಜ್ | 5–00 |
| 45. | ಆರೋಗ್ಯ | 5–00 |
| 46. | ಮಹಾತ್ಮ ಗಾಂಧಿ ಪ್ರಸ್ತುತತೆ | 10–00 |
| 47. | ಬಹುರೂಪಿ ಗಾಂಧಿ | 10–00 |
| 48. | ನಂದಿ ಗಿರಿಧಾಮದಲ್ಲಿ ಮಹಾತ್ಮ ಗಾಂಧಿ | 30–00 |
| 49. | ಕೃತಯುಗಿ ವಿನೋಬಾ ಭಾವೆ | 15–00 |
| 50. | ಮೋಹನ ತರಂಗ | 40–00 |
| 51. | ನಮ್ಮ ಗಾಂಧಿ ತಾತ | 5–00 |

ಮುಂದೆಯದು ... 84

| | | |
|---|---|---|
| 52. | ಗೀತಾ ಪ್ರವಚನ | 80–00 |
| 53. | ಜೆ.ಪಿ. ಜೀವನ ಹಾದಿ | 45–00 |
| 54. | ಗಣ್ಯರು ಕಂಡಂತೆ ಗಾಂಧಿ | 20.0 |
| 55. | ಗೀತಾಮಾತೆ | 80.00 |
| 56. | ಲೋಕ ಚಿಂತಕರು | 145.00 |
| 57. | ಕರ್ನಾಟಕದ ಕಸ್ತೂರ್‌ಬಾ ಯಶೋಧರಮ್ಮ ದಾಸಪ್ಪ | 38.00 |
| 58. | ಮಹದೇವ ದೇಸಾಯಿ | 63.00 |
| 59. | ಸಮಾಜವಾದ : ಗಾಂಧೀ ದೃಷ್ಟಿಕೋನ | 15.00 |
| 60. | ಮಹಾತ್ಮ ಗಾಂಧಿ ಮತ್ತು ಆಧ್ಯಾತ್ಮಿಕ ರಾಜಕಾರಣ | 28.00 |
| 61. | Temple & Mosque | 10–00 |
| 62. | Rastrapita Mahatma Gandhi | 25–00 |
| 63. | Swarajya of My Dreams | 5–00 |
| 64. | Gandhi My Grand Father | 5–00 |
| 65. | Grand Pa Gandhi | 5–00 |
| 66. | Relevance of Gandhi | 20–00 |
| 67. | Vinoba Sage of the Age | 20.00 |

## ಕರ್ನಾಟಕದಲ್ಲಿ ಗಾಂಧೀಜಿ ಭೇಟಿ ನೀಡಿದ ಸ್ಥಳಗಳು

| | |
|---|---|
| • ಬೆಂಗಳೂರು | ದಿ. 08–05–1915 |
| • ಬೆಳಗಾವಿ | ದಿ. 27–04–1916 ರಿಂದ<br>ದಿ. 01–05–1916 ರವರೆಗೆ |
| • ಬಿಜಾಪುರ (ವಿಜಯಪುರ) | ದಿ. 05–05–1918 ರಿಂದ<br>ದಿ. 06–05–1918 ರವರೆಗೆ |
| • ಕಾಸರಗೋಡು | ದಿ. 19–08–1920 |
| • ಮಂಗಳೂರು | ದಿ. 20–08–1920 |
| • ಬೆಂಗಳೂರು | ದಿ. 21–08–1920 |
| • ನಿಪ್ಪಾಣಿ, ಚಿಕ್ಕೋಡಿ, ಹುಕ್ಕೇರಿ<br>ಸಂಕೇಶ್ವರ, ಬೆಳಗಾವಿ | ದಿ. 08–11–1920 |
| • ಬೆಳಗಾವಿ ಶಹಾಪುರ<br>ಖಾನಾಪುರ, ನಂದಗಢ<br>ಹಳ್ಯಾಳ | ದಿ. 09–11–1920 |
| • ಧಾರವಾಡ | ದಿ. 10–11–1920 |
| • ಹುಬ್ಬಳ್ಳಿ, ಗದಗ | ದಿ. 11–11–1920 |
| • ಸಾಂಗಲಿ | ದಿ. 12–11–1920 |
| • ಬಾಗಲಕೋಟೆ | ದಿ. 27–05–1921 |
| • ಬಿಜಾಪುರ (ವಿಜಯಪುರ), ಸೊಲ್ಲಾಪುರ | ದಿ. 28–05–1921 |
| • ಬಳ್ಳಾರಿ | ದಿ. 30–09–1921 |
| • ಬೆಳಗಾವಿ | ದಿ. 21–12–1924 ರಿಂದ<br>ದಿ. 30–12–1924 ರವರೆಗೆ |
| • ಗುಲ್ಬರ್ಗಾ | ದಿ. 22–02–1927 ರಿಂದ<br>ದಿ. 23–02–1927 ರವರೆಗೆ |
| • ನಿಪ್ಪಾಣಿ | ದಿ. 27–03–1927 ರಿಂದ<br>ದಿ. 31–03–1927 ರವರೆಗೆ |

| | |
|---|---|
| ● ಬೆಳಗಾವಿ | ದಿ. 01-04-1927 |
| | ದಿ. 18-04-1027 ರಿಂದ<br>ದಿ. 19-04-1927ರವರೆಗೆ |
| ● ಬೆಂಗಳೂರು | ದಿ. 06-06-1927 ರಿಂದ<br>ದಿ. 13-07-1927 ರವರೆಗೆ |
| ● ತುಮಕೂರು | ದಿ. 14-07-1927 |
| ● ತುಮಕೂರು, ಮಧುಗಿರಿ | ದಿ. 15-07-1927 |
| ● ತುಮಕೂರು | ದಿ. 16-07-1927 |
| ● ಬೆಂಗಳೂರು | ದಿ. 17-07-1927 |
| ● ಬೆಂಗಳೂರು | ದಿ. 18-07-1927 |
| ● ಮೈಸೂರು | ದಿ.19-07-1927 ರಿಂದ<br>ದಿ. 21-07-1927 ರವರೆಗೆ |
| ● ಕೃಷ್ಣರಾಜಸಾಗರ, ಯಡತೊರೆ ಶ್ರೀರಂಗಪಟ್ಟಣ, ದರಿಯಾದೌಲತ್ | ದಿ. 21-07-1927 |
| ● ಮೈಸೂರು | ದಿ. 23-07-1927 |
| ● ಬೆಂಗಳೂರು | ದಿ. 24-07-1927 ರಿಂದ<br>ದಿ. 30-07-1927 ರವರೆಗೆ |
| ● ಕ್ಲೊಸ್‌ಪೇಟೆ (ರಾಮನಗರ) | ದಿ. 31-07-1927 |
| ● ಕಾನಕಾನಹಳ್ಳಿ (ಕನಕಪುರ) | |
| ● ಬೆಂಗಳೂರು | ದಿ. 01-08-1927 |
| ● ಅರಸೀಕರೆ, ಹಾಸನ | ದಿ. 02-08-1927 |
| ● ಹಾಸನ | ದಿ. 03-08-1927 |
| ● ಹಾಸನ, ಹೊಳೆನರಸೀಪುರ | ದಿ. 04-08-1927 |
| ● ಬೆಂಗಳೂರು | ದಿ. 05-08-1927 ರಿಂದ<br>ದಿ. 11-08-1927 ರವರೆಗೆ |
| ● ದಾವಣಗೆರೆ | ದಿ. 12-08-1927 |
| ● ಹರಿಹರ, ಹೊನ್ನಾಳಿ ಮಲೆಬೆನ್ನೂರು | ದಿ. 13-08-1927 |

| | |
|---|---|
| ● ಶಿವಮೊಗ್ಗ | ದಿ. 14-08-1927 ರಿಂದ<br>ದಿ. 15-08-1927 ರವರೆಗೆ |
| ● ಆಯನೂರು, ಕುಂಸಿ, ಸಾಗರ<br>ಶಿವಮೊಗ್ಗ | ದಿ. 16-08-1927 |
| ● ಶಿವಮೊಗ್ಗ, ತೀರ್ಥಹಳ್ಳಿ<br>ಮಂದಗದ್ದೆ, ರಾಜನೂರು | ದಿ. 17-08-1927 |
| ● ಭದ್ರಾವತಿ, ತರೀಕೆರೆ | ದಿ. 18-08-1927 |
| ● ಬೀರೂರು, ಕಡೂರು | |
| ● ಚಿಕ್ಕಮಗಳೂರು | ದಿ. 19-08-1927 |
| ● ಬೇಲೂರು, ಹಳೇಬೀಡು | ದಿ. 20-08-1927 |
| ● ಅರಸೀಕೆರೆ | |
| ● ತಿಪಟೂರು | ದಿ. 21-08-1927 |
| ● ಬೆಂಗಳೂರು | ದಿ. 22-08-1927 |
| ● ಬೆಂಗಳೂರು | ದಿ. 23-08-1927 |
| ● ಹೊಸೂರು, ಸೂಳಗಿರಿ<br>ಕೃಷ್ಣಗಿರಿ | ದಿ. 24-08-1927 |
| ● ಬೆಂಗಳೂರು | ದಿ. 25-08-1927 ರಿಂದ<br>ದಿ. 30-08-1927 ರವರೆಗೆ |
| ● ಹಿಂದೂಪುರ, ವಿಧುರಾಶ್ವತ್ಥ<br>ಗೌರಿಬಿದನೂರು<br>ದೊಡ್ಡಬಳ್ಳಾಪುರ, ತುಮಕೂರು<br>ತ್ಯಾಮಗೊಂಡ್ಲು, ನೆಲಮಂಗಲ<br>ಬೆಂಗಳೂರು, ಮೈಸೂರು | ದಿ. 04-01-1934 |
| ● ತಗಡೂರು, ಬದನವಾಳ<br>ನಂಜನಗೂಡು, ಮೈಸೂರು | ದಿ. 05-01-1934 |
| ● ಮಂಡ್ಯ, ಚನ್ನಪಟ್ಟಣ, ರಾಮನಗರ<br>ಕನಕಪುರ, ಬಿಡದಿ, ಕೆಂಗೇರಿ | ದಿ. 06-01-1934 |

- ಬೆಂಗಳೂರು — ದಿ. 07-01-1934 ರಿಂದ ದಿ. 09-01-1934 ರವರೆಗೆ
- ಪೊನ್ನಂಪೇಟೆ, ಹುದಿಕೇರಿ — ದಿ. 22-02-1934
- ವಿರಾಜಪೇಟೆ, ಬೆಳ್ಳೂರು — ದಿ. 23-02-1934
- ಸೋಮವಾರ ಪೇಟೆ
- ಗುಂಡುಕಟ್ಟೆ
- ಮಡಿಕೇರಿ, ಸಂಪಾಜೆ, ಸುಳ್ಯ — ದಿ. 24-02-1934
- ಪುತ್ತೂರು, ಉಪ್ಪಿನಂಗಡಿ
- ವಿತಲಗಬ್ಬ, ಕಲ್ಲಡ್ಕ, ಪಾಣೆ
- ಮಂಗಳೂರು, ಬಂಟ್ವಾಳ
- ಮಂಗಳೂರು
- ಮಂಗಳೂರು, ಗುರುಪುರ, ಬಜ್ಪೆ ಯಕ್ಕೂರು, ಕಟೀಲು, ಕಿನ್ನಗೋಳಿ ಮೂಲ್ಕಿ, ಪಡುಬಿದ್ರಿ, ಕಾಟಪಾಡಿ ಗುರುಪುರ, ಉದ್ಯಾವರ ಉಡುಪಿ, ಬ್ರಹ್ಮಾವರ, ಸಿದ್ದಾಪುರ — ದಿ. 25-02-1934
- ಕುಂದಾಪುರ — ದಿ. 26-02-1934
- ಕುಂದಾಪುರ, ಭಟ್ಕಳ ಹೊನ್ನಾವರ, ಕಾರವಾರ — ದಿ. 27-02-1934
- ಕಾರವಾರ, ಕುಮುಟಾ, ಅಂಕೋಲ ಚಂದಿಯಾ, ಶಿರಸಿ — ದಿ. 28-02-1934
- ಶಿರಸಿ, ಸಿದ್ದಾಪುರ, ದಾಸನಕೊಪ್ಪ ಇಸಲೂರು, ಏಕಾಂಬಿ, ಆಲೂರು ಬ್ಯಾಡಗಿ, ಮೋಟೆಬೆನ್ನೂರು — ದಿ. 01-03-1934
- ಹಾವೇರಿ, ರಾಣೆಬೆನ್ನೂರು, ಹರಿಹರ ದಾವಣಗೆರೆ, ಹರಪನಹಳ್ಳಿ, ಕೊಟ್ಟೂರು ಕೂಡ್ಲಿಗೆ, ದುಗ್ಗಾವತಿ, ಕಣಿವೆಹಳ್ಳಿ ಸೊಂಡೂರು — ದಿ. 02-03-1934

| | |
|---|---|
| ● ಸೊಂಡೂರು, ಬಳ್ಳಾರಿ, ಹೊಸಪೇಟೆ ಭಾನಾಪುರ, ಗದಗ, ಜಕ್ಕಲಿ, ಹುಬ್ಬಳ್ಳಿ | ದಿ. 03-03-1934 |
| ● ಹುಬ್ಬಳ್ಳಿ, ಧಾರವಾಡ, ಅಮ್ಮಿನಭಾವಿ ಹಿರೇಉಳ್ಳಗೇರಿ, ಬೈಲಹೊಂಗಲ ಉಪ್ಪಿನ, ಬೆಟಗೇರಿ, ಸೌಂದತ್ತಿ ಸಂಪಗಾಂವ್, ಹೊಸೂರು, ಬೆಳಗಾವಿ | ದಿ. 04-03-1934 |
| ● ಬೆಳಗಾವಿ | ದಿ. 05-03-1934 |
| ● ಬೆಳಗಾವಿ | ದಿ. 06-03-1934 |
| ● ಬೆಳಗಾವಿ, ಯಮಕನಮರಡಿ ಹುಕ್ಕೇರಿ, ಗೋಕಾಕ, ಸಂಕೇಶ್ವರ ನವಲೀಹಾಳ, ಚಿಕ್ಕೋಡಿ, ಅಂಕಲಿ | ದಿ. 07-03-1934 |
| ● ಶೆಡಬಾಳ, ಬನಹಟ್ಟಿ, ಅಥಣಿ ಬಿಜಾಪುರ (ವಿಜಯಪುರ), ತಿಕೋಟ, ತೊರವಿ ಇಳಕಲ್ | ದಿ. 08-03-1934 |
| ● ನಂದಿ ಬೆಟ್ಟ | 10-05-1936 ರಿಂದ 30-05-1936 ರವರೆಗೆ |
| ● ಚಿಕ್ಕಬಳ್ಳಾಪುರ, ಶಿಡ್ಲಘಟ್ಟ, ಚಿಂತಾಮಣಿ ಕೋಲಾರ, ಬಂಗಾರ ಪೇಟೆ, ಕೆ. ಜಿ. ಎಫ್ | 31-05-1936 |
| ● ಬೆಂಗಳೂರು | 01-06-1936 ರಿಂದ 12-06-1936 ರವರೆಗೆ |
| ● ಬೆಳಗಾವಿ ಜಿಲ್ಲೆಯ ಹುದಲಿ | 16-04-1937 ರಿಂದ 21-04-1937ರವರೆಗೆ |

## ಏಕಾದಶ ವ್ರತಗಳು

| | |
|---|---|
| ಸತ್ಯ | **Truth** |
| ಅಹಿಂಸೆ | **Ahimsa or Love** |
| ಅಸ್ತೇಯ (ಕದಿಯದಿರುವುದು) | **Non-Stealing** |
| ಬ್ರಹ್ಮಚರ್ಯ | **Brahmacharya or Chastity** |
| ಅಸಂಗ್ರಹ (ಅಪರಿಗ್ರಹ) | **Non-Possession** |
| ಶರೀರ ಶ್ರಮ | **Physical Labour** |
| ಅಸ್ವಾದ (ನಾಲಿಗೆ ಚಪಲ) | **Control on the Palate** |
| ಸರ್ವತ್ರ ಭಯವರ್ಜನ (ಅಭಯ) | **Fearlessness** |
| ಸರ್ವಧರ್ಮ ಸಮಾನತ್ವ | **Equality of Religion** |
| ಸ್ವದೇಶಿ | **Swadeshi** |
| ಸ್ಪರ್ಶ ಭಾವನೆ (ಅಸ್ಪೃಶ್ಯತಾ ನಿವಾರಣೆ) | **Removal of Untouchability** |

---

## ಏಳು ಸಾಮಾಜಿಕ ಪಾತಕಗಳು Seven Social Sins

| | |
|---|---|
| ತತ್ವರಹಿತ ರಾಜಕಾರಣ | **Politics without Principles** |
| ದುಡಿಮೆ ಇಲ್ಲದ ಸಂಪತ್ತು | **Wealth without Work** |
| ಆತ್ಮಸಾಕ್ಷಿ ಇಲ್ಲದ ಸಂತೋಷ | **Pleasure without Conscience** |
| ಚಾರಿತ್ರ್ಯವಿಲ್ಲದ ಶಿಕ್ಷಣ | **Education without Character** |
| ನೀತಿ ಇಲ್ಲದ ವ್ಯಾಪಾರ | **Commerce without Morality** |
| ಮಾನವೀಯತೆ ಇಲ್ಲದ ವಿಜ್ಞಾನ | **Science without Humanity** |
| ತ್ಯಾಗ ಇಲ್ಲದ ಪೂಜೆ | **Worship without Sacrifice** |

– ಮಹಾತ್ಮ ಗಾಂಧೀಜಿ

# ಹದಿನೆಂಟು ರಚನಾತ್ಮಕ ಕಾರ್ಯಗಳು
## 18 CONSTRUCTIVE PROGRAMMES

| | |
|---|---|
| ಮತೀಯ ಐಕ್ಯತೆ | **Communal Unity** |
| ಅಸ್ಪೃಶ್ಯತಾ ನಿವಾರಣೆ | **Removal of Untouchability** |
| ಪಾನನಿರೋಧ | **Prohibition** |
| ಖಾದಿ | **Khadi** |
| ಇತರೆ ಗ್ರಾಮೋದ್ಯೋಗಗಳು | **Other village industries** |
| ಗ್ರಾಮ ನೈರ್ಮಲ್ಯ | **Village Sanitation** |
| ಮೂಲ ಶಿಕ್ಷಣ | **Basic Education** |
| ವಯಸ್ಕರ ಶಿಕ್ಷಣ | **Adult Education** |
| ಮಹಿಳಾ ಸಬಲೀಕರಣ | **Women Empowerment** |
| ಆರೋಗ್ಯ ಮತ್ತು ಶುಚಿತ್ವ ಶಿಕ್ಷಣ | **Hygiene & Health Education** |
| ಪ್ರಾದೇಶಿಕ ಭಾಷೆ | **Provincial Languages** |
| ರಾಷ್ಟ್ರಭಾಷೆ | **National Language** |
| ಆರ್ಥಿಕ ಸಮಾನತೆ | **Economic Equality** |
| ರೈತರ ಸಬಲೀಕರಣ | **Empowerment of Farmers** |
| ಕಾರ್ಮಿಕರ ಸಬಲೀಕರಣ | **Empowerment of Labours** |
| ಆದಿವಾಸಿ ಸಬಲೀಕರಣ | **Tribal Empowerment** |
| ಕುಷ್ಠರೋಗ ನಿರ್ಮೂಲನೆ | **Cure of Lepracy** |
| ವಿದ್ಯಾರ್ಥಿಗಳು | **Students** |

ಪುರುಷನ ಒಡನಾಡಿಯಾದ ಸ್ತ್ರೀ ಪುರುಷನಷ್ಟೇ ಬುದ್ಧಿ ಪ್ರಧಾನಳಿರುವಳು. ಅವಳಿಗೆ ಪುರುಷನ ಪ್ರತಿ ಕಾರ್ಯಾಂಗದಲ್ಲಿಯೂ ಪ್ರವೇಶಿಸುವ ಹಕ್ಕಿದೆಯಲ್ಲದೆ, ಅವಳಿಗೆ ಅವನಷ್ಟೇ ಸ್ವಾತಂತ್ರ್ಯಾಧಿಕಾರ ಹಾಗು ಸಮಾನತೆಗಳಿರುತ್ತವೆ. ಗಂಡಸಿಗಿದ್ದಂತೆ ಹೆಂಗಸಿಗೂ ಅವಳ ಕಾರ್ಯರಂಗದಲ್ಲಿ ಹಿರಿದಾದ ಸ್ಥಾನವಿದೆ.

ಟಾಲಸ್ಟಾಯ್ ಅವರು ಹೇಳುವಂತೆ ಹೆಣ್ಣುಮಕ್ಕಳು ಗಂಡಸರ ಮಾಯಾಜಾಲದಲ್ಲಿ ಶ್ರಮಿಸಹತ್ತಿದ್ದಾರೆ. ಅವರು ಅಹಿಂಸೆಯ ಅರ್ಥವನ್ನು ಸರಿಯಾಗಿ ಮಾಡಿಕೊಂಡರೆ ತಮ್ಮನ್ನು ದುರ್ಬಲರೆಂದು ಕರೆಸಿಕೊಳ್ಳಲು ಅವರೆಂದೂ ಅನುಮತಿಯನ್ನೀಯುತ್ತಿರಲಿಲ್ಲ.

- ಮಹಾತ್ಮ ಗಾಂಧಿ

ಮಹಿಳೆಯರ ಬಗ್ಗೆ ಅಪಾರ ವಿಶ್ವಾಸ, ಪ್ರೀತಿ ಹಾಗೂ ಗೌರವನ್ನು ಹೊಂದಿದ್ದ ಗಾಂಧಿ ಅವರು ಭಾರತ ಸ್ವಾತಂತ್ರ ಹೋರಾಟದಲ್ಲಿ ಮಹಿಳೆಯರಿಲ್ಲದೆ ಸ್ವಾತಂತ್ರ ದೊರಕದು ಎಂದು ನಂಬಿದವರು. ಮಹಿಳಾ ದೌರ್ಜನ್ಯ, ಅವರ ಮೇಲಿನ ಅನಿಷ್ಠ ಪದ್ಧತಿಗಳು ಅವರ ಅವಲಂಬಿತ ಬದುಕಿನ ಬಗ್ಗೆ ಚರ್ಚಿಸುತ್ತಾ ಎಲ್ಲಾ ಅನ್ಯಾಯ ಹೇರಿಕೆ ವಿರುದ್ಧ ದನಿ ಎತ್ತಿದರು. ಸಾಮೂಹಿಕವಾಸ-ಆಶ್ರಮ ಜೀವನ ಮತ್ತು ಖಾದಿ-ಸ್ವದೇಶಿ, ಸ್ವಾಭಿಮಾನಿ ಮತ್ತು ಸ್ವಾವಲಂಬನೆಯ ಜೀವನದ ಹಾದಿಯನ್ನು ತೋರಿಸಿಕೊಟ್ಟರು.

- ವೂಡೇ ಪಿ. ಕೃಷ್ಣ

ಮಹಿಳೆಯರ ಮೇಲಿನ ಅನಿಷ್ಠ ಪದ್ಧತಿಗಳನ್ನು ಹೋಗಲಾಡಿಸಲು ಅವರು ನಡೆಸಿದ ಹೋರಾಟಗಳ ಪ್ರತಿರೂಪವೇ, 'ಮಹಿಳೆಯರು' ಎಂಬ ಈ ಕೃತಿಯ ಅಡಿಪಾಯವಾಗಿದೆ. ಮಹಿಳೆ ಪುರುಷನಷ್ಟೇ ಸಮಾನಳು, ಅವಳ ಹಕ್ಕು, ಅವಕಾಶ, ಕರ್ತವ್ಯಗಳ ಕುರಿತು ಅವರ 'ಹರಿಜನ' ಮತ್ತು 'ಯಂಗ್ ಇಂಡಿಯಾ' ಪತ್ರಿಕೆಗಳಲ್ಲಿ ಆಗಿಂದಾಗ್ಗೆ ಬರೆದ ಲೇಖನಗಳು ಮತ್ತು ವಿಚಾರಗಳೇ ಈ ಕೃತಿಗೆ ಮೂಲಾಧಾರವಾಗಿವೆ.

- ಇಂದಿರಾ ಕೃಷ್ಣಪ್ಪ

**ಕರ್ನಾಟಕ ಗಾಂಧೀ ಸ್ಮಾರಕ ನಿಧಿ**

ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು

ISBN NO : 978-81-941136-9-0